ಶ್ರೀ ಶಿವರಾತ್ರೀಶ್ವರ ಧಾರ್ಮಿಕದತ್ತಿ ಪ್ರಕಟಣೆ/
ಸ್ವರವಚನಸಾಹಿತ್ಯಮಾಲೆ
ಸ್ವರವಚನ ಸಂಪುಟ : ಮೂರು

# ಕರಿಬಸವೇಶ್ವರನ ವಚನ

ಸಂಪಾದಕರು
ಜಿ. ಜಿ. ಮಂಜುನಾಥನ್



ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ
ಮೈಸೂರು

*SWARAVACHANA SAMPUTA-3* A collection of songs of *KARIBASAVESWARA* edited by G. G. Manjunathan, Research Assistant, Editing Section, Kuvempu Institute of Kannada Studies, University of Mysore, Mysore. Published by J. S. S. Granthamale, Mysore 570004. First Edition 1995, Pages: xx + 175 Price Rs. 50



ಪ್ರಥಮ ಮುದ್ರಣ ೧೯೯೫



ಬೆಲೆ : ರೂ. 50

ಮುದ್ರಕರು

ರಾ. ವೆಂ. ಶ್ರೀನಿವಾಸಮೂರ್ತಿ
ಶ್ರೀ ಶಕ್ತಿ ಎಲೆಕ್ಟ್ರಿಕ್ ಪ್ರೆಸ್, ಜಯನಗರ, ಮೈಸೂರು ೧೪

# ಪರಿವಿಡಿ

# ಶುಭ ಹಾರೈಕೆ

ವೀರಶೈವ ಧಾರ್ಮಿಕ ಪೀಠಗಳ, ವಿಶ್ವವಿದ್ಯಾಲಯಗಳ ಮತ್ತು ವಿದ್ವಾಂಸರುಗಳ ಒಂದು ಶತಮಾನದ ದುಡಿಮೆಯಿಂದಾಗಿ 'ವಚನಸಾಹಿತ್ಯ'ದ ಸಂಶೋಧನೆ-ಪ್ರಕಟನೆ ಒಂದು ಹಂತಕ್ಕೆ ಬಂದು ನಿಂತಿದೆ ಎನ್ನಬಹುದು. ಇದೀಗ ಇಷ್ಟೇ ವಿಪುಲವಾಗಿರುವ, ಇದಕ್ಕಿಂತ ಹೆಚ್ಚು ಜನಪ್ರಿಯವಾಗಿರುವ "ಸ್ವರವಚನಸಾಹಿತ್ಯ"ದ ಸಂಶೋಧನೆ-ಪ್ರಕಟನೆ ವ್ಯಾಪಕವಾಗಿ, ವ್ಯವಸ್ಥಿತವಾಗಿ ನಡೆಯಬೇಕಾಗಿರುವುದು ಅಗತ್ಯವಾಗಿದೆ. ಡಾ. ಫ. ಗು. ಹಳಕಟ್ಟಿಯವರು ಮೊದಲುಮಾಡಿ ಅನೇಕ ಜನ ವಿದ್ವಾಂಸರು ಈ ಸಾಹಿತ್ಯವನ್ನು ಆಗಾಗ ಪ್ರಕಟಿಸುತ್ತ ಬಂದರೂ ಅದು ಬೆಳಕು ಕಂಡುದು ಕಡಿಮೆ. ಹೀಗಾಗಿ ಪ್ರಾಚೀನ ಹಸ್ತಪ್ರತಿಗಳಲ್ಲಿ, ಜನರ ಬಾಯಿಯಲ್ಲಿ ಬದುಕಿಬಂದ ಈ ಪ್ರಕಾರವನ್ನು ಒಮ್ಮೆ ಇಡಿಯಾಗಿ ಪ್ರಕಟಿಸಬೇಕಾಗಿದೆ. ಹಾಗೆ ಪ್ರಕಟವಾದರೆ ನಮ್ಮ ಹಾಡುಗಬ್ಬ ಪರಂಪರೆಗೆ ಇರುವ ಪ್ರಾಚೀನತೆಯನ್ನೂ ನಿರಂತರತೆಯನ್ನೂ ಎತ್ತಿ ತೋರಿಸಿದಂತಾಗುತ್ತದೆ. ಜೊತೆಗೆ ವೀರಶೈವಕ್ಕೆ ತನ್ನದೇ ಆದ ಹಾಡುಗಬ್ಬ ಪರಂಪರೆಯೊಂದು ಇರುವುದನ್ನು ಸ್ಪಷ್ಟಪಡಿಸಿದಂತಾಗುತ್ತದೆ. ಈ ಘನವಾದ ಉದ್ದೇಶವನ್ನು ಕಣ್ಣು ಮುಂದಿಟ್ಟುಕೊಂಡು ಪ್ರಸ್ತುತ ಯೋಜನೆಯನ್ನು ಶ್ರೀ ಶಿವರಾತ್ರೀಶ್ವರ ಧಾರ್ಮಿಕ ದತ್ತಿಯಿಂದ ಕೈಗೆತ್ತಿಕೊಂಡಿದೆ. ಈಗಾಗಲೇ ಡಾ. ಎಲ್. ಬಸವರಾಜು ಅವರು ಸಂಪಾದಿಸಿದ 'ಶಿವದಾಸ ಗೀತಾಂಜಲಿ' ಯನ್ನು ಜೆ. ಎಸ್. ಎಸ್. ಗ್ರಂಥಮಾಲೆಯಿಂದ ಪ್ರಕಟಿಸುವ ಮೂಲಕ ಈ ಸಾಹಿತ್ಯದ ಮಹತ್ವವನ್ನು ಪ್ರಥಮಬಾರಿಗೆ ಬೆಳಕಿಗೆ ತಂದುದಲ್ಲದೆ ಅದರ ಮುಂದುವರಿಕೆಯೆಂಬಂತೆ ಈ ಯೋಜನೆಯನ್ನು ಹಮ್ಮಿಕೊಂಡಿದೆ.

ಇಂಥ ಒಂದು ವ್ಯಾಪಕ ಯೋಜನೆಯ ಅನುಷ್ಠಾನಕ್ಕೆ ವಿದ್ವಾಂಸರ ನೆರವು ಅಗತ್ಯ. ಕರ್ನಾಟಕದ ಬೇರೆ ಬೇರೆ ಭಾಗಗಳ ವಿದ್ವಾಂಸರು ಈ ಕಾರ್ಯದಲ್ಲಿ ಸಹಕರಿಸಲು ಮುಂದೆ ಬಂದಿರುವುದು ಒಂದು ಶುಭಯೋಗ. ಇವರೆಲ್ಲರ ನೆರವಿನಿಂದ ಸ್ವರವಚನಸಾಹಿತ್ಯವನ್ನು ಮೊದಲು ಬಿಡಿಯಾದ ಸಂಪುಟಗಳ ರೂಪದಲ್ಲಿ ಪ್ರಕಟಿಸುವುದು ಎಂದು ಯೋಜಿಸಲಾಗಿದೆ. ಈ ಯೋಜನೆಯು ಫಲಪ್ರದವಾಗುವ ರೀತಿಯಲ್ಲಿ ಎಲ್ಲ ಸ್ವರವಚನಗಳು ಹಸ್ತಪ್ರತಿಗಳಿಂದ, ಜನಪದರ ಕಂಠಸ್ಥಲಗಳಿಂದ, ಸ್ಮೃತಿಪಟಲಗಳಿಂದ ಸೆರೆ ಬಿಡಿಸಿಕೊಂಡು ಬೆಳಕಿಗೆ ಬಂದ ಬಳಿಕ ಶ್ರೀ ಶಿವರಾತ್ರೀಶ್ವರ ಧಾರ್ಮಿಕದತ್ತಿಯು ಪ್ರಕಟಿಸಿದ ಹಾಗೂ ಅನ್ಯರು ಪ್ರಕಟಿಸಿದ ಎಲ್ಲ ಸಂಪತ್ತನ್ನು ಕ್ರೋಡೀಕರಿಸಿ ; ವ್ಯವಸ್ಥಿತವಾಗಿ ವರ್ಗೀಕರಿಸಿ ; ಅದನ್ನು "ಸಮಗ್ರ ಸ್ವರವಚನಸಾಹಿತ್ಯ ಪ್ರಕಟನ ಯೋಜನೆ" ಹೆಸರಿನಿಂದ ಸಂಪುಟಶ್ರೇಣಿಯಲ್ಲಿ ಹೊರತರಲು ಸಂಕಲ್ಪಿಸಲಾಗಿದೆ.

ಈ ಸಂಕಲ್ಪವು ಈಡೇರುವಂತಾಗಲೆಂದು ಆಶಿಸುತ್ತ, ಇದರಲ್ಲಿ ನೆರವಾದ ಎಲ್ಲರಿಗೂ ಸಕಲ ಶ್ರೇಯಸ್ಸನ್ನು ಹಾರೈಸುತ್ತೇವೆ.

ಮಾಸಶಿವರಾತ್ರಿ
ಆಗಸ್ಟ್ ೨೪, ೧೯೮೫

ಶಿವರಾತ್ರಿದೇಶಿಕೇಂದ್ರ ಸ್ವಾಮಿಗಳು

# ಪ್ರಕಾಶಕರ ನುಡಿ

ಸುತ್ತೂರು ಜಗದ್ಗುರು ಶ್ರೀ ಶಿವರಾತ್ರೀಶ್ವರ ವೀರಸಿಂಹಾಸನ ಮಠ–ನಮ್ಮ ನಾಡಿನ ಒಂದು ಪ್ರಸಿದ್ಧ ಧಾರ್ಮಿಕಪೀಠ. ಧರ್ಮವನ್ನು ಶರಣಸಿದ್ಧಾಂತದ ವ್ಯಾಪಕ ಅರ್ಥದಲ್ಲಿ ಪರಿಭಾವಿಸಿದ ಈ ಪೀಠವು 'ದಾಸೋಹ' ಪದವನ್ನು ಕಾಲಕ್ಕೆ ತಕ್ಕಂತೆ ಪ್ರಸ್ತುತಗೊಳಿಸುತ್ತ ಬಂದಿದೆ. ಈ ಪ್ರಯೋಗದ ಒಂದು ಅಂಗ 'ಸಾಹಿತ್ಯದಾಸೋಹ.' ಅದರ ಫಲವೇ ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ. ಈ ಗ್ರಂಥಮಾಲೆಯಲ್ಲಿ 'ಶಿವದಾಸಗೀತಾಂಜಲಿ'ಯನ್ನು ಪ್ರಕಾಶನಗೊಳಿಸುವ ಮೂಲಕ ಶರಣರ 'ಸ್ವರವಚನ ಸಾಹಿತ್ಯ' ಪ್ರಕಟನೆಯ ಇತಿಹಾಸದಲ್ಲಿ ಶ್ರೀಮಠವು, ಡಾ. ಫ. ಗು. ಹಳಕಟ್ಟಿಯವರ ಬಳಿಕ ಇನ್ನೊಂದು ಹೊಸಘಟ್ಟವನ್ನೇ ತೆರೆಯಿತು. ಧರ್ಮದಾಸೋಹದ ಜೊತೆಗೆ ಈ ಸಾಹಿತ್ಯದಾಸೋಹದ ಕಾರ್ಯವೂ ಕೂಡ ನಿರಂತರವಾಗಿ ಮುಂದುವರಿಯಬೇಕೆಂಬ ಸದುದ್ದೇಶದಿಂದ ಪರಮಪೂಜ್ಯ ಜಗದ್ಗುರು ಡಾ. ಶ್ರೀ ಶಿವರಾತ್ರಿರಾಜೇಂದ್ರ ಮಹಾಸ್ವಾಮಿಗಳವರು 'ಶ್ರೀ ಶಿವರಾತ್ರೀಶ್ವರ ಧಾರ್ಮಿಕದತ್ತಿ'ಯನ್ನು ಸಂಸ್ಥಾಪಿಸಿದರು. ಈ ದತ್ತಿಯ ಆಶ್ರಯದಲ್ಲಿ ಸಾಹಿತ್ಯದಾಸೋಹದ ಅಂಗವಾಗಿ ಈಗಾಗಲೇ ಹಲವಾರು ವಿಚಾರ ಸಂಕಿರಣಗಳನ್ನೂ ಸಮ್ಮೇಳನಗಳನ್ನೂ ನೆರವೇರಿಸುತ್ತಾ ಬಂದಿರುತ್ತದೆ. ಉತ್ತಮೋತ್ತಮ ಗ್ರಂಥಗಳನ್ನು ಪ್ರಕಟಿಸಲಾಗುತ್ತಿದೆ. ಈ ಗ್ರಂಥಮಾಲೆಯಿಂದ ಆರಂಭಿಸಿದ ಸ್ವರವಚನ ಸಾಹಿತ್ಯ ಪ್ರಕಟನೆಯು ಮುಂದುವರಿಕೆಯೆಂಬಂತೆ 'ಮುಪ್ಪಿನ ಷಡಕ್ಷರಿಗಳ ಕೈವಲ್ಯಪದ' ಸಂಪುಟವನ್ನು ಪ್ರಕಟಿಸಿದೆ. ಈಗ ಈ ಪ್ರಯತ್ನಕ್ಕೆ ಪೂರ್ಣ ಸ್ವರೂಪವನ್ನು ಕೊಡುವ ಉದ್ದೇಶದಿಂದ ಬೃಹತ್‌ಪ್ರಮಾಣದ 'ಸಮಗ್ರ ಸ್ವರವಚನಸಾಹಿತ್ಯ ಪ್ರಕಟನ ಯೋಜನೆ'ಯನ್ನು ಕೈಗೆತ್ತಿಕೊಂಡಿದೆ.

ವೀರಶೈವ ಸಾಹಿತ್ಯದ ಮಹತ್ವದ ಪ್ರಕಾರವಾದ ವಚನಸಾಹಿತ್ಯ ಈವರೆಗೆ ಬಹು ಮಟ್ಟಿಗೆ ಪೂರ್ಣಪ್ರಮಾಣದಲ್ಲಿ ಪ್ರಕಟವಾಗಿದೆ. ವಚನಗಳ ಸಾಹಿತ್ಯಿಕ, ಸಾಮಾಜಿಕ, ಸೈದ್ಧಾಂತಿಕ ಪ್ರಭಾವಗಳಿಗೆ ಮಾರುಹೋದ ವಿದ್ವಾಂಸರು, ಶರಣರ ಇನ್ನೊಂದು ಮಹತ್ವದ ಪ್ರಕಾರವಾದ 'ಸ್ವರವಚನಸಾಹಿತ್ಯ'ದ ಪ್ರಕಟಣೆಯ ಕಡೆಗೆ ಅಷ್ಟಾಗಿ ಗಮನ ಹರಿಸಲಿಲ್ಲ. ಈ ಕೊರತೆಯನ್ನು ತುಂಬಿಕೊಡುವ ಮಹೋದ್ದೇಶದಿಂದ ಪ್ರಸ್ತುತ ಯೋಜನೆಯನ್ನು ಹಮ್ಮಿಕೊಳ್ಳಲಾಗಿದೆ.

ತಮ್ಮ ಅನುಭಾವದ ವಾಚನಪಾತಳಿಗಾಗಿ 'ವಚನ'ಗಳನ್ನು ಬರೆದ ಶರಣರು, ಶ್ರವಣಪಾತಳಿಗಾಗಿ 'ಸ್ವರವಚನ'ಗಳನ್ನು ಬರೆದರು. ಹನ್ನೆರಡನೆಯ ಶತಮಾನದಿಂದ ಇಪ್ಪತ್ತನೆಯ ಶತಮಾನದವರೆಗೆ ನೂರಾರು ಜನ ಶಿವಶರಣರು, ಶಿವಕವಿಗಳು ಸೃಷ್ಟಿಸಿದ ಈ ಸಾಹಿತ್ಯ ಲಿಖಿತ ಮತ್ತು ಮೌಖಿಕ ಪರಂಪರೆಯಲ್ಲಿ ಸಾಗಿಬಂದಿದೆ. ಈ ಸಾಹಿತ್ಯವನ್ನು

ಸಮಗ್ರವಾಗಿ ಪ್ರಕಟಿಸಲಿರುವ ಪ್ರಸ್ತುತ ಯೋಜನೆಯಲ್ಲಿ ನಾವು ಎರಡು ಹಂತಗಳನ್ನು ಕಲ್ಪಿಸಿಕೊಂಡಿದ್ದೇವೆ.

ಅಪ್ರಕಟಿತ ರೂಪದಲ್ಲಿರುವ ಲಿಖಿತ ಮತ್ತು ಮೌಖಿಕ ಪರಂಪರೆಯ ಎಲ್ಲ ಸ್ವರ ವಚನಗಳನ್ನು ಪ್ರಕಟಿಸುವ ಉದ್ದೇಶ ನಮ್ಮ ಕಣ್ಣಮುಂದಿದೆ. ಇಲ್ಲಿ ಪ್ರಾಚೀನ ಸ್ವರವಚನ ಕೃತಿಗಳನ್ನು ಪರಿಷ್ಕರಿಸಿ ಪ್ರಕಟಿಸುವುದು ; ಹಸ್ತಪ್ರತಿಗಳಲ್ಲಿ ಬಿಡಿಬಿಡಿ ಯಾಗಿ ಸಿಗುವ ಸ್ವರವಚನಗಳನ್ನು ಸಂಗ್ರಹಿಸಿ ಸಂಪುಟರೂಪದಲ್ಲಿ ಪ್ರಕಟಿಸುವುದು ; ಬೇರೆ ಬೇರೆ ಪ್ರದೇಶಗಳಲ್ಲಿ ಮೌಖಿಕ ಪರಂಪರೆಯಲ್ಲಿ ಸಿಗುವ ಸ್ವರವಚನಗಳನ್ನು ಧ್ವನಿ ಮುದ್ರಣ ಮಾಡಿಕೊಂಡು ಸಂಪುಟ ರೂಪದಲ್ಲಿ ಪ್ರಕಟಿಸುವುದು—ಇದು ಮೊದಲ ಹಂತದ ಪ್ರಕಟನ ಕಾರ್ಯ.

ಹೀಗೆ ಎಲ್ಲ ಮೂಲಗಳಿಂದ ಸಂಗ್ರಹಿಸಿ ನಾವು ಪ್ರಕಟಿಸಿದ ಮತ್ತು ಈಗಾಗಲೇ ಅನ್ಯಸಂಸ್ಥೆಗಳು ಪ್ರಕಟಿಸಿದ ಎಲ್ಲ ಸ್ವರವಚನಗಳ ರಾಶಿಯನ್ನು ಒಂದು ಶಿಸ್ತಿಗೆ ಅಳವಡಿಸಿ ಹದಿನೈದು ಸಂಪುಟಗಳಲ್ಲಿ ಏಕಕಾಲಕ್ಕೆ ಪ್ರಕಟಿಸುವುದು ಎರಡನೆಯ ಹಂತದ ಕಾರ್ಯ ವಾಗಿದೆ. ಈ ಹಂತದ ಒಟ್ಟು ಯೋಜನೆ ಹೀಗಿದೆ :

ಮೊದಲನೆಯದು–ಬಸವೇಶ್ವರರು ಮೊದಲಾದ ಹನ್ನೆರಡನೆಯ ಶತಮಾನದ ಶರಣರ ಬಿಡಿ ಸ್ವರವಚನ ಸಂಪುಟ, ಎರಡನೆಯದು–ನಿಜಗುಣಶಿವಯೋಗಿ, ಸಪ್ತಕಾವ್ಯದ ಗುರುಬಸವ, ಸರ್ಪಭೂಷಣ ಶಿವಯೋಗಿ, ಮುಪ್ಪಿನ ಷಡಕ್ಷರಿ, ಬಾಲಲೀಲಾ ಮಹಾಂತ ಶಿವಯೋಗಿ, ಮೈಲಾರ ಬಸವಲಿಂಗಶರಣರು ಇತ್ಯಾದಿ ಪ್ರಸಿದ್ಧ ಸ್ವರವಚನಕಾರರ ಸಂಪುಟ. ಮೂರು, ನಾಲ್ಕು ಮತ್ತು ಐದು–ಗುರುಬಸವಾರ್ಯ, ಕರಸ್ಥಲದನಾಗಿದೇವ, ಮೊಗ್ಗೆಯ ಮಾಯಿದೇವ, ಕಸ್ತೂರದೇವ. ಕವಿಲಿಂಗ, ವರತೆಯ ಸೋಮಣ್ಣ, ಸೋದೆ ಸದಾಶಿವರಾಯ, ದೊಡ್ಡ ಷಡಕ್ಷರಿಸ್ವಾಮಿ, ಜಿಗುನಿಮರುಳದೇವ, ಬೆಂಗಳೂರು ಮುದ್ವೀರ ಸ್ವಾಮಿ, ಕಾರುಗಹಳ್ಳಿ ಶಾಂತಯ್ಯ, ಶಂಕರದೇವ, ನಿಷ್ಕಲರು, ಮರಿಶಾಂತಬಸವ, ಸೋಮನಕಟ್ಟೆ ಕರಿಬಸವೇಶ್ವರ, ಗುರುಗುಂಡಬಸವ–ಇತ್ಯಾದಿ ಅಪ್ರಸಿದ್ಧ ಸ್ವರವಚನ ಕಾರರ ಸಂಪುಟಗಳು. ಆರು, ಏಳು, ಎಂಟು, ಒಂಬತ್ತು ಮತ್ತು ಹತ್ತು–ಹಸ್ತಪ್ರತಿಗಳಲ್ಲಿ ಸಿಗುವ ಬಿಡಿಸ್ವರವಚನ ಸಂಪುಟಗಳು. ಹನ್ನೊಂದು, ಹನ್ನೆರಡು, ಹದಿಮೂರು, ಹದಿ ನಾಲ್ಕು ಮತ್ತು ಹದಿನೈದು–ಬೇರೆ ಬೇರೆ ಪ್ರದೇಶಗಳಲ್ಲಿ ಮೌಖಿಕ ಪರಂಪರೆಯಲ್ಲಿ ಸಿಗುವ ಕಡಕೋಳ ಮಡಿವಾಳಪ್ಪ, ಕೊಡಲೂರು ಬಸವಲಿಂಗಶರಣರು, ನೀರಲಕೇರಿ ಸ್ವಾಮಿಗಳು, ರಾಂಪುರದ ಬಕ್ಕಪ್ಪ ಮೊದಲಾದವರ ಸ್ವರವಚನ ಸಂಪುಟಗಳು.

ಈ ಯೋಜನೆ ಶ್ರೀಮಂತದ ಸಾಹಿತ್ಯಿಕ ಸಾಧನೆಗಳಲ್ಲಿ ಒಂದು ಮೈಲಿಗಲ್ಲು. ಇದು ಪೂರ್ಣಗೊಂಡರೆ ನಮ್ಮ ಅವಜ್ಞೆಯಲ್ಲಿ ಮುಳುಗಿಹೋಗಿರುವ ಹೊಸಸಾಹಿತ್ಯಪ್ರಕಾರ ವೊಂದು ಸಮಗ್ರರೂಪದಲ್ಲಿ ಬೆಳಕಿಗೆ ಬರುತ್ತದೆ. ಹಾಗೆ ನೋಡಿದರೆ ಬಹುಸಂಖ್ಯೆ ಜನರ ಮೇಲೆ ಮೋಡಿ ಹಾಕಿದ, ಅವರ ವ್ಯಕ್ತಿತ್ವವನ್ನು ತೀಡುತ್ತ ಬಂದ ಸಾಹಿತ್ಯ ಸಮುದಾಯದಲ್ಲಿಯೇ ಹಾಡುಗಬ್ಬಪ್ರಕಾರ ಗಣ್ಯವಾದುದು. ಕನ್ನಡಸಾಹಿತ್ಯದ ಮೊದಲ

ಘಟ್ಟದ ರಚನೆಗಳಾಗಿರುವ ಈ ದೇಶೀಯ 'ಹಾಡುಗಬ್ಬ'ಗಳನ್ನು 'ಓದುಗಬ್ಬ'ವಾದ ಚಂಪೂ ಮೊದಲಾದುವು ಮೂಲೆಗೆ ತಳ್ಳಿದವು. ಮುಂದೆ ಹನ್ನೆರಡನೆಯ ಶತಮಾನದಲ್ಲಿ ದೇಶೀನೆಲೆಗಳಿಂದ ಬಂದ ಶರಣರು ದೇಶೀಪರಂಪರೆಯನ್ನು ಮತ್ತೆ ಸ್ಥಾಪಿಸುವ ಮೂಲಕ, ಮೂಲೆಗುಂಪಾಗಿದ್ದ 'ಹಾಡುಗಬ್ಬ' ಪರಂಪರೆಯನ್ನು ಹರಿಗಡಿದು, ಅದಕ್ಕೆ ಲಿಖಿತ ಸಾಹಿತ್ಯದಲ್ಲಿ ನ್ಯಾಯವಾದ ಸ್ಥಾನವನ್ನು ಒದಗಿಸಿಕೊಟ್ಟರು. ಇದರಿಂದಾಗಿ ಜೇಡರ ದಾಸಿಮಯ್ಯ, ಬಸವಣ್ಣ, ಮಹಾದೇವಿಯಕ್ಕ ಮೊದಲಾದ ಶರಣರು ರಚಿಸಿದ 'ಹಾಡುಗಬ್ಬ'ಪ್ರಕಾರ 'ಸ್ವರವಚನ'ವೆಂಬ ಹೆಸರಿನಲ್ಲಿ ಪ್ರಸಿದ್ಧಿ ಪಡೆಯಿತು. ಬಳಿಕ ನಿಜಗುಣಶಿವ ಯೋಗಿಗಳಲ್ಲದೆ ವಿಜಯನಗರದ ಪ್ರೌಢದೇವರಾಯನ ಕಾಲದಲ್ಲಿ ಸಪ್ತಕಾವ್ಯದ ಗುರು ಬಸವ, ಮೊಗ್ಗೆಯ ಮಾಯಿದೇವ, ಕರಸ್ಥಲದ ನಾಗಿದೇವ ಮೊದಲಾದ ವೀರಶೈವ ಅನುಭಾವಿಗಳು'ಸ್ವರವಚನ'ಪ್ರಕಾರದಲ್ಲಿ ಕೃಷಿ ಮಾಡಿದರು. ಪ್ರೌಢದೇವರಾಯನ ತರುವಾಯ ನೂರು ವರ್ಷ ಗತಿಸುವಲ್ಲಿ ಪಟ್ಟಕ್ಕೆ ಬಂದ ಕೃಷ್ಣದೇವರಾಯನ ಪರಿಸರದ ಪುರಂದರ ದಾಸ, ಕನಕದಾಸ ಮೊದಲಾದವರೆಲ್ಲ ಈ 'ಹಾಡುಗಬ್ಬ' ಪ್ರಕಾರವನ್ನು ಹರಿಸರ್ವೋತ್ತಮ ನೆಲೆಯಲ್ಲಿ ದುಡಿಸಿ 'ಕೀರ್ತನ' ಹೆಸರಿನಲ್ಲಿ ಪ್ರಸಿದ್ಧಿಪಡಿಸಿದರು. ಈ ದಾಸಸಂಪ್ರದಾಯದ ಎರಡನೆಯ ಘಟ್ಟದಲ್ಲಿ ಪ್ರಸನ್ನ ವೆಂಕಟದಾಸ, ವಿಜಯದಾಸ, ಮಹಿಪತಿದಾಸ ಮೊದಲಾದವರು ಹುಟ್ಟಿ 'ಕೀರ್ತನೆ' ಪ್ರಕಾರವನ್ನು ವಿಪುಲ ಪ್ರಮಾಣದಲ್ಲಿ ಬೆಳೆಸಿದರು, ರತ್ನಾಕರವರ್ಣಿ ಮೊದಲಾದ ಜೈನ ಕವಿಗಳು 'ಹಾಡು'ಗಳನ್ನು ಬರೆದರು. ಜೈನರ ಹಾಡು, ದಾಸರ ಕೀರ್ತನೆಯ ಜೊತೆ ಜೊತೆಗೇ ಕಸ್ತೂರದೇವ, ಜಿಗುನಿ ಮರುಳದೇವ, ಸರ್ಪಭೂಷಣಶಿವಯೋಗಿ, ಮುಪ್ಪಿನಷಡಕ್ಷರಿ, ಮೈಲಾರ ಬಸವಲಿಂಗ ಶರಣರು, ಕಡಕೋಳ ಮಡಿವಾಳಪ್ಪ, ಕೂಡಲೂರು ಬಸವಲಿಂಗಶರಣರು ಮೊದಲಾದ ವೀರಶೈವ ಅನುಭಾವಿಗಳು'ಸ್ವರವಚನ'ಪರಂಪರೆಯನ್ನು ಮುಂದುವರಿಸಿದರು. ಈ ಎಲ್ಲ ರಚನೆಗಳನ್ನು ಒಂದೂ ಬಿಡದಂತೆ ಸಂಗ್ರಹಿಸಿ ಪ್ರಕಟಿಸಿದರೆ 'ಕೀರ್ತನ ಸಾಹಿತ್ಯ'ದ ಮಗ್ಗುಲಲ್ಲಿ 'ಸ್ವರವಚನ ಸಾಹಿತ್ಯ'ವೆಂಬ ಇನ್ನೊಂದು ಪ್ರಕಾರ ಎದ್ದು ಕಾಣುತ್ತದೆ. 'ಹರಿಸರ್ವೋತ್ತಮ' ಹಾಡುಗಬ್ಬ ಸಂಪತ್ತಿನ ಜೊತೆ 'ಶಿವಸರ್ವೋತ್ತಮ' ಹಾಡುಗಬ್ಬ ಸಂಪತ್ತೂ ತೆರೆದುಕೊಳ್ಳುತ್ತದೆ.

ಪ್ರಾಚೀನಕಾಲದಿಂದಲೂ ಕರ್ನಾಟಕದಲ್ಲಿ ಓದುಗಬ್ಬ ಮತ್ತು ಹಾಡುಗಬ್ಬ ಎಂಬ ಎರಡು ಸಾಹಿತ್ಯಪ್ರಕಾರಗಳು ಬೆಳೆದುಬಂದಿವೆ. ಇವುಗಳಲ್ಲಿ ಒಂದು ವಾಚನಪಾತಳಿಯದು, ಸಾಹಿತ್ಯಗುಣ ಪ್ರಧಾನವಾದುದು. ಇನ್ನೊಂದು ಶ್ರವಣಪಾತಳಿಯದು, ಸಂಗೀತ ಗುಣ ಪ್ರಧಾನವಾದುದು. ಆದರೆ ಇಂಗ್ಲೀಷರ ಸಂಪರ್ಕದಿಂದಾಗಿ ಸಾಕ್ಷರತೆ ಬೆಳೆದು, ನಮ್ಮಲ್ಲಿ ಓದುಗಬ್ಬದೊಂದಿಗೆ ಹಾಡುಗಬ್ಬವನ್ನೂ ವಾಚನಪಾತಳಿಯಲ್ಲಿಟ್ಟು ಅಭ್ಯಾಸ ಮಾಡುವ ತಪ್ಪು ಕ್ರಮ ವರ್ಧಿಸುತ್ತ ನಡೆಯಿತು. ಆಗ ಈ ಸ್ವರವಚನಗಳನ್ನು ಧ್ವನಿ ಮಾಧ್ಯಮದಲ್ಲಿ ಕೇಳಿ ಸಂಗೀತದ ನೆಲೆಯಲ್ಲಿ ವಿಮರ್ಶಿಸದೆ, ಅಕ್ಷರ ಮಾಧ್ಯಮದಲ್ಲಿ ಓದಿ ಸಾಹಿತ್ಯದ ನೆಲೆಯಲ್ಲಿ ವಿಮರ್ಶಿಸುವ ತಪ್ಪು ಪದ್ಧತಿ ನಮ್ಮಲ್ಲಿ ಬೆಳೆಯಿತು. ಇದರಿಂದಾಗಿ,

ಅವು ಸಾಹಿತ್ಯಿಕ ಗುಣವಿದೂರ ರಚನೆಗಳೆಂಬ ಟೀಕೆಗೆ ಗುರಿಯಾದವು. ನಿಜಸ್ಥಿತಿಯೆಂದರೆ ಈ ಸಾಹಿತ್ಯವನ್ನು ಕಿವಿಯಿಂದಲೇ ಕೇಳಿ ವಿಮರ್ಶಿಸುವ ಹೊಸ ವಿಮರ್ಶಾಮಾನದಂಡ ಗಳು ಇಂದು ಬೆಳೆದುಬರಬೇಕಾಗಿದೆ.

ಎರಡನೆಯದಾಗಿ ನಾವು ಮಾಡಬೇಕಾಗಿರುವ ಇನ್ನೊಂದು ಕಾರ್ಯವೆಂದರೆ, ಈ ಸಾಹಿತ್ಯದ ಪ್ರಸಾರ. ಧ್ವನಿಮಾಧ್ಯಮದ ಸಾಹಿತ್ಯವಾಗಿರುವ ಇದನ್ನು ಸಂಗೀತದ ಮೂಲಕ ಪ್ರಕಟಿಸುವ ವ್ಯವಸ್ಥೆ ಮಾಡುವುದು ಅವಶ್ಯವಿದೆ. ಅಂದರೆ ಸಂಗೀತ ಕಲಾವಿದ ರಿಂದ ಪ್ರಚುರಪಡಿಸುವ, ಧ್ವನಿಸುರುಳಿಗಳನ್ನು ಸಿದ್ಧಪಡಿಸುವ ಮೊದಲಾದ ಚಟುವಟಿಕೆ ಗಳು ಬೆಳೆದು ಬರಬೇಕಾಗಿದೆ.

ಹೀಗೆ ಸಮಗ್ರವಾಗಿ ಪ್ರಕಟಿಸುವುದು, ಹೊಸಬಗೆಯ ಮಾನದಂಡದಿಂದ ವಿಮರ್ಶಿ ಸುವುದು, ಸಂಗೀತಮಾಧ್ಯಮದಲ್ಲಿ ಪ್ರಸಾರಗೊಳಿಸುವುದು—ಈ ಮೂರೂ ಹಂತಗಳಲ್ಲಿ ಕೆಲಸ ನಡೆದರೆ ಮಾತ್ರ 'ಸ್ವರವಚನ'ಗಳಿಗೆ ಸರಿಯಾದ ನ್ಯಾಯ ಒದಗುತ್ತದೆ. ಈ ಬಗೆಯ ನ್ಯಾಯವನ್ನು ಒದಗಿಸಿಕೊಡುವ ಮೊದಲನೆಯ ಹಂತವಾಗಿ 'ಸಮಗ್ರ ಸ್ವರವಚನ ಸಾಹಿತ್ಯ ಪ್ರಕಟನ ಯೋಜನೆ"ಯನ್ನು ಶ್ರೀಮಠ ಕೈಗೊಂಡಿದೆ.

ಈ "ಸ್ವರವಚನ ಸಾಹಿತ್ಯ ಪ್ರಕಟನ ಯೋಜನೆ"ಗೆ ಪ್ರೋತ್ಸಾಹವನ್ನು ನೀಡಿ, ಸ್ವರವಚನ ಸಾಹಿತ್ಯ ಸಂಪುಟಗಳು ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ ಯಿಂದ ಪ್ರಕಾಶನಗೊಳ್ಳಲು ಆಶೀರ್ವದಿಸಿದ ಪರಮಪೂಜ್ಯ ಜಗದ್ಗುರು ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳವರಿಗೆ ಪ್ರಣಾಮಗಳನ್ನು ಸಲ್ಲಿಸುತ್ತೇವೆ.

ತತ್ತ್ವಕ್ಕೆ ತತ್ತ್ವ, ಸಾಹಿತ್ಯಕ್ಕೆ ಸಾಹಿತ್ಯವಾಗಿರುವ "ಸ್ವರವಚನಸಾಹಿತ್ಯ" ಏಕ ಕಾಲಕ್ಕೆ ಆತ್ಮಕಲ್ಯಾಣವನ್ನೂ ಸಮಾಜಕಲ್ಯಾಣವನ್ನೂ ಪ್ರತಿಪಾದಿಸುವ ಮಹತ್ವವನ್ನು ಗಳಿಸಿದೆ. ಈ ಮೌಲಿಕ ಸಾಹಿತ್ಯವನ್ನು ಜನತೆಗೆ ಒದಗಿಸುವುದು ಈ ಯೋಜನೆಯ ಮುಖ್ಯ ಉದ್ದೇಶವಾಗಿದೆ. ಇಂತಹದೊಂದು ಅತ್ಯಮೂಲ್ಯವಾದ ಯೋಜನೆಯನ್ನು ರೂಪಿಸಿ ಮಾರ್ಗದರ್ಶನ ಮಾಡಿದವರು ನಮ್ಮ ನಾಡಿನ ಹೆಸರಾಂತ ಹಿರಿಯ ಸಂಶೋಧ ಕರೂ ಪ್ರಾಧ್ಯಾಪಕರೂ ಆದ ಡಾ. ಎಂ. ಎಂ. ಕಲಬುರ್ಗಿ ಅವರು. ಪ್ರಾರಂಭದಲ್ಲಿ ಸುಪ್ರಸಿದ್ಧ ಸಾಹಿತಿಗಳಾದ ಡಾ. ಎಚ್. ತಿಪ್ಪೇರುದ್ರಸ್ವಾಮಿಯವರ ನಿರ್ದೇಶನದಲ್ಲಿ ಈ ಯೋಜನೆಯನ್ನು ಕಾರ್ಯರೂಪಕ್ಕೆ ತರಲು ಯೋಜಿಸಲಾಗಿತ್ತು. ಆದರೆ ಈಗ ಡಾ. ಎಂ. ಎಂ. ಕಲಬುರ್ಗಿಯವರ ನಿರ್ದೇಶನದಲ್ಲಿ ಈ ಸಂಪುಟಗಳು ಹೊರಬರುತ್ತಿವೆ.

ಮೈಸೂರು ವಿಶ್ವವಿದ್ಯಾನಿಲಯ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇ ಶಕರು ಸಂಸ್ಥೆಯಲ್ಲಿನ ಹಸ್ತಪ್ರತಿಗಳನ್ನು ಬಳಸಿಕೊಳ್ಳಲು ಅವಕಾಶವನ್ನಿತ್ತು ಸಹಕರಿಸಿ ದ್ದಾರೆ. ಈ ಯೋಜನೆಯ ಅಂಗವಾಗಿ 'ಸ್ವರವಚನಸಂಪುಟ—ಮೂರು'. 'ಕರಿಬಸ ವೇಶ್ವರನ ವಚನ.'—ಇದನ್ನು ಮೈಸೂರು ವಿಶ್ವವಿದ್ಯಾನಿಲಯ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯ ಸಂಪಾದನ ವಿಭಾಗದಲ್ಲಿ ಹಿರಿಯ ಸಂಶೋಧನ ಸಹಾಯಕರಾಗಿರುವ

ಶ್ರೀ ಜಿ. ಜಿ. ಮಂಜುನಾಥನ್ ಅವರು ಸಂಪಾದಿಸಿ ಸಿದ್ಧಪಡಿಸಿಕೊಟ್ಟಿದ್ದಾರೆ. ಮೈಸೂರು ಶ್ರೀ ಶಕ್ತಿ ಎಲೆಕ್ಟ್ರಿಕ್ ಪ್ರೆಸ್‌ನ ಶ್ರೀ ರಾ. ವೆಂ. ಶ್ರೀನಿವಾಸಮೂರ್ತಿಯವರು ಅಂದವಾಗಿ ಮುದ್ರಿಸಿ ಕೊಟ್ಟಿದ್ದಾರೆ. ಈ ಕಾರ್ಯದಲ್ಲಿ ನೆರವಾದ ಎಲ್ಲರಿಗೂ ಧನ್ಯವಾದಗಳು.

ಈ ಕೃತಿಯನ್ನು ಸಹೃದಯರು ಸ್ವಾಗತಿಸುವರೆಂದು ನಂಬಿದ್ದೇವೆ.

ಪ್ರಕಾಶಕರು

# ಪೀಠಿಕೆ

ತೋಂಟದ ಸಿದ್ಧಲಿಂಗನ ಉತ್ತರ ಕಾಲದಲ್ಲಿ ರೂಪುಗೊಂಡ ೧೨೮ ಸ್ವರವಚನಗಳ ಕೃತಿ ಕರಿಬಸವೇಶ್ವರನ ವಚನ. ಇದರಲ್ಲಿ ಬರುವ ಕರಿಬಸವೇಶ್ವರನ ಬಗ್ಗೆ ಪ್ರಸ್ತುತ ಕೃತಿಯನ್ನು ಆಧರಿಸಿ ಕೆಲವು ಮಾತುಗಳನ್ನು ಹೇಳಿದೆ. ಅದರ ಪ್ರಕಾರ ಕರಿಬಸವೇಶನು (ಕಾಳಬಸವೇಶ) ಶಿವನ ಕೃಪಾಪ್ರಸಾದದಿಂದ ಧರೆಗೆ ಅವತರಿಸಿದ ವಿಚಾರ, ಬಸವಾದಿ ಪ್ರಮಥ ಸಂಕುಲದ ಪರಂಪರೆಯಲ್ಲಿ ಆತ ಬಂದ ವಿವರಗಳು ಲಭಿಸುತ್ತವೆ :

ಸಂಗಮೇಂದ್ರನೊಡ್ಡೋಲಗದಿ ಷಣ್ಮುಖನೆ ಬಾರೆಂದು
ಕರೆದಿತ್ತನ್ನ ತಂದೆ ಶಂಕರನು
ಕುಂಭಿನಿಗೆ ಅಪ್ರತಿಮನೆಂಬ ಪೆಸರಂ ಕೊಟ್ಟು
ತುಂಬಿ ಬಾಯೊಳಗೆ ಬಾಯಿಟ್ಟು ತಾಂಬೂಲವ
ಗೊಂಬೆ ಬಿದ್ದಿತು ಕಂಬಿ ಮುರಿದು ಲಾಗವು ತಪ್ಪಿ
ಡೊಂಬಿಗಿಕೆಂದು ಕಳುಹಿದನು ॥ ೨-೧ ॥

ಷಣ್ಮುಖನು ಕರಿಬಸವನಾಗಿ ಅವತರಿಸಿ ನರವೇಷವ ತಾಳಿಬಂದ ಸಂಗತಿ :

ಗುರು ಕರಿ[ಯ] ಬಸವಾರ್ಯ ದೇವರು
ಪರಮ ಉಪದೇಶವನು ಮಾಡಲು
ನರನವೇಷವ ತಾಳಿ ಬಂದನು ಅರಸು ನಿನ್ನೆಡೆಗೆ
ಶರಣಸತಿ ನೀನಾಗಿ ಬಂದುದ
ಲಿಂಗಪತಿ ತಾನಾಗಿ ನಿಂದುದ
ಪರವಶವನಾ ತೋರೆ ಬಂದೆನು ಪರಮ ಗುರುವಾಗಿ ॥ ೬೨-೨ ॥

ಎನ್ನುವಲ್ಲಿ ತಿಳಿದು ಬರುತ್ತದೆ. ಈತನು ಕಲಿಯುಗದಲ್ಲಿ ಅವತಾರವೆತ್ತಿದ ಉದ್ದೇಶವೆಂದರೆ :

ನಿಂದಕತಮೆಟ್ಟಿ ತಾಮಸ ಮಾಯಕೋಲಾಹಳ
ತಾಂಡವವಾಡಿದನು ಮಚ್ಚಂದ್ರಶೇಖರನು ॥ ೩-ಪಲ್ಲ ॥

ಎಂದು ತಿಳಿಸಿ ಬೇಟೆಯ ರೂಪಕದ ಮೂಲಕ ತೆಲುಗು ಜೊಮ್ಮಯ್ಯ ಸಹವಾಗಿ ಮೊಲದ ಬೇಂಟೆಯ ಹೊರಟ ಕರಿಬಸವದಂಡೇಶನೆಂದು ಹೇಳಿದೆ. ಆತ ಹುಲಿ ಕರಡಿ ಕಪಿಗಳನ್ನು ಕಂಡದ್ದು ಕರಿಯುಗವ ಕಡಿದದ್ದು ಮುಂತಾದ ವಿವರಗಳು ಲಭಿಸುತ್ತವೆ. ಮಹಾಮಹಿಮ ಕರಿಬಸವೇಶ್ವರನ ಬಾಲಲೀಲೆ (೩-೩) ಪ್ರೌಢಾವಸ್ಥೆಗಳನ್ನು ತಿಳಿಸಿ

ಅವನು "ಬಾರೆಂಬುದೆ ಒರವು ಕೊಲ್ಲೆಂಬುದೆ ಕೊಲೆಯು" ಎಂದು ಆವನ ಹಿರಿಮೆಯನ್ನು ಹೇಳಿದೆ. ಮುಂದುವರಿದು :

ಸಂಗಮೇಂದ್ರನ ಪ್ರಿಯಸಕಲಗುಣಸಂಪನ್ನ
ಮಂಗಳಾತ್ಮಕ ಗುರು ಕರಿಬಸವ
ಜಂಗಮರಾಯನು ಜಗದಸೂತ್ರಿಕನು
ಲಿಂಗವಸಂತನು ಕರಿಬಸವ ॥ ೧೯-೧ ॥

ಎನ್ನುವ ಸ್ತುತಿಯಿದ್ದು ಆತನ ಸ್ವರೂಪವನ್ನು ಹೀಗೆ ಹೇಳಿದೆ :

ಭಕ್ತಿ ಬಳೆಯ ತೊಟ್ಟು ಮುಕ್ತಿ ಮೂಕುತಿಯಿಟ್ಟು
ಸತ್ಯವೆ ಸಕಲಾಭರಣ
ತರ್ಕ ತಾನೆಂದೆಂಬ ಕಾಸೆಯ ಬಿಗಿದುಟ್ಟು
ರತ್ನದೋಕುಳಿಯ ವಸವಂತ ॥ ೪೫-೪ ॥

ಕರಿಬಸವೇಶ್ವರನ ಊರು ಗುಮ್ಮಳಾಪುರ. ಇದಕ್ಕೆ ಪೂರಕವಾಗಿ :

ಚಿನ್ನದ ಕಳಶವಿಟ್ಟು ಚೆನ್ನವೀರಣ್ಣಗೆ
ಗುಮ್ಮಳಪುರಕೆ ಗುರುಬಂದ ಪ್ರಭುರಾಯ
ಚೆನ್ನಬಸವೇಶನೊಡಗೂಡಿ ॥ ೫೧-೧೬ ॥

ಗೂಗೆ ಹುಯಿಲಿಕ್ಕಿದವು ಗುಮ್ಮಳಪುರದೊಳಗೆ
ಬೇಗೆಯನಿಕ್ಕಿದರು ನಮ್ಮ ಶರಣರು ಕರ್ಮದ
ಕಾಗೆಯ ಗೂಡ ಅಳಿದರು ॥ ೫೧-೧೭ ॥

ಎನ್ನುವ ಮಾತುಗಳನ್ನು ನೋಡಬಹುದು.
ಕರಿಬಸವೇಶ್ವರನ ಗುರು ಗುಮ್ಮಳಾಪುರದ ಗುರು ಚೆನ್ನಬಸವೇಶ ಎನ್ನುವ ಸಂಗತಿ

ಗುಮ್ಮಳಾಪುರದೊಳಗೆ ಗುರುಚೆನ್ನಬಸವೇಶ
ಚಿನ್ನದ ಕಂತೆ ಕಮಂಡಲದ ಸಹವಾಗಿ
ಉನ್ನಂತವಾಗಿಹ ಕಯ್ಯೊಳು ಲಾಕುಳದಂಡ
ಚೆನ್ನಬಸವೇಶ ಗುರು ನಮ್ಮಯ್ಯ ಬಂದ ॥ ೨೩-೫ ॥

ಎನ್ನುವ ಪದ್ಯದಿಂದ ತಿಳಿದುಬರುತ್ತದೆ.

ಅಲ್ಲಮ, ಬಸವ, ಚನ್ನಬಸವ, ಸಿದ್ಧರಾಮ, ಮಡಿವಾಳಮಾಚಯ್ಯ, ತೆಲುಗ ಜೊಮ್ಮಯ್ಯ ಮೊದಲಾದ ಶರಣಸಂಕುಲವನ್ನಲ್ಲದೆ ಕೊಟ್ಟೂರ ಬಸವೇಶ (೨-೩) ರೇವಣಾರ್ಯನ ಕುವರ ರುದ್ರಮುನಿ ಚಿಕ್ಕಸಿದ್ಧೇಶ (೫೪-೨) ಗುರುದೇವಣಾರ್ಯ (೧೩-೩) ಗುರುಶಾಂತ (೧-೧೦) ನಿಜ ಗುರು ಸಿದ್ಧಶಾಂತ (೪೯-೩) ಕೆಂಪನಂಜೇಶ, ಕೆಂಪಮಲ್ಲೇಶ, ಕೆಂಪಸೋಮೇಶ, ಕೆಂಪ ಗಂಗಾಧರ, ಕೆಂಪಬಸವರಾಜ (೪೫-೨) ಮುಂತಾದವರನ್ನು ನೆನೆಯುತ್ತಾನೆ.

ಪ್ರಾಸಂಗಿಕವಾಗಿ ಚಾಮರಾಜ ಒಡೆಯ (೧೬೧೭–೩೭) ಚೆನ್ನಪಟ್ಟಣದ ಜಗದೇವರಾಯ (ಸು. ೧೬೨೦) ಯಳಂದೂರಿನ ರಾಯ ರಾವುತ ರಾಮರಾಯ ಖಾನರಾಯ (೧೫೯೦), ಯಳಂದೂರಿನ ಚೆನ್ನೊಡೆಯ (೧೬೦೦), ವಿಜಾಪುರದ ಅಲಿ ಆದಿಲ್‌ಷಹನ ಪತ್ನಿ ಚಾಂದಬೀಬಿ (೧೬೦೦) ಎನ್ನುವ ಐತಿಹಾಸಿಕ ವ್ಯಕ್ತಿಗಳ ಉಲ್ಲೇಖ ಇಲ್ಲಿ ಬಂದಿದೆ.

ಮುಸ್ಲಿಂ ಧರ್ಮದ ಪ್ರಾಬಲ್ಯವನ್ನು ಕರ್ನಾಟಕದಲ್ಲಿ ಈ ಕೃತಿಕಾರ ಕಂಡುದರ ಸಾಕ್ಷಿಯಾಗಿ ಅಲ್ಲಖುದಾಅಲ್ಲ ಏಕೋದೇವ (೨೭–೨) ವಸುಧೆಯೊಳಿಹ ಪಾತಕರನು ಮಿಸುಮಿಲಿ ಮಾಡಬೇಕೆಂದು (೪೪ ಪಲ್ಲ) ಕಲಂಧರ (೪೨–೪) ತುರುಕ ದಂಡೆತ್ತಿ ಬಂದಿತು ಧರೆಯೊಳಗೆಲ್ಲ...ಕರಿಯ ಬಾಬಯ್ಯ ತುರುಕರು (೫೦–೨೧) ಡಿಳ್ಳಿಯ ಪಾಚ್ಛಾವ (೫೦–೨೬) ಎನ್ನುವ ಮಾತುಗಳು ನಿಲ್ಲುತ್ತವೆ. ಸು. ೧೭ನೆಯ ಶತಮಾನದ ಪೂರ್ವಾರ್ಧದಲ್ಲಿದ್ದ ಐತಿಹಾಸಿಕ ವ್ಯಕ್ತಿಗಳು ಮತ್ತು ಮುಸ್ಲಿಂ ಪ್ರಾಬಲ್ಯದ ಈ ವಿವರಗಳಿಂದ ಕರಿಬಸವೇಶ್ವರನು ಸು. ೧೬೫೦ರಲ್ಲಿದ್ದಿರಬಹುದೆಂದು ಹೇಳಬಹುದು.

ಕರಿಬಸವೇಶ್ವರನು ನಿಂತಲ್ಲಿ ನಿಲ್ಲದೆ ಸಾಕಷ್ಟು ಸಂಚರಿಸಿದ್ದಾನೆ. ಕೊಟ್ಟೂರು (೨–೩) ಹೆಡತಲೆ (೩೧–೬) ಗುಮ್ಮಳಾಪುರ (೩೪–೯) ನುಗ್ಗಿಹಳ್ಳಿ (೫೨–೨) ಮುಳಿನಾಡು (೫೨–೨೧) ಮಾಸನೂರು (೫೭–೩) ಎಳವಂದೂರ ಕೋಂಟೆ (೬೯–೩) ಮುಳವಳ್ಳಿ, ತಲಕಾಡು (೮೬–೨) ಅರಕಲಗೂಡು (೯೭–೨) ಶಿವಗಂಗೆ (೯೭–೨) ಮೊದಲಾದ ಊರುಗಳು ಈ ಕೃತಿಯಲ್ಲಿ ಹೆಸರುಗೊಂಡಿವೆ. ಕಾವೇರಿ ಕಲ್ಯಾಣ ದೇವಸಭೆಯಾಯಿತ್ತು (೩೧–೮) ಕಾವೇರಿ ಮಧ್ಯ (೪೩–೨) ನಂಜನಗೂಡು, ಮುಡುಕುತೊರೆ, ತಿರುಮುಕೂಡಲು ನರಸೀಪುರದ ಉಲ್ಲೇಖಗಳು ಮತ್ತೆ ಮತ್ತೆ ಬರುವ ಕಾರಣದಿಂದ ಈತನ ಕಾರ್ಯಕ್ಷೇತ್ರ ಮೈಸೂರುಜಿಲ್ಲೆಯಾಗಿರಬಹುದು.

ಕರಿಬಸವೇಶ್ವರನು ವೀರಮಾಹೇಶ್ವರನಿಷ್ಠೆಯಿಂದ ವೀರಶೈವವನ್ನು ಪ್ರತಿಪಾದಿಸಿದ್ದಾನೆ. ವೀರಭದ್ರನ ಅವತಾರ ಶರಣ ಮಡಿವಾಳ ಮಾಚಯ್ಯ ಇವನ ಸ್ಫೂರ್ತಿ. ಪಡು ದರುಶನಕೆ ಒಂದು ಗುದುಗೆಯನು ಪಿಡಿತಂದೆ (೧೨–೧೧) ಎಂದು ಹೇಳಿದ್ದಾನೆ. ಗುರು ಲಿಂಗ ಜಂಗಮದ ಹೊಲಬನ್ನರಿಯಬೇಕೆನ್ನುವುದು ಇವನ ನಿಲುವು :

ಗುರು ಉಪದೇಶವಿಲ್ಲದೆ
ಲಿಂಗದ ನೆಲೆಯ ಕಾಣದೆ
ಜಂಗಮದ ಹೊಲಬ ತಿಳಿಯದೆ
ಜಂಗುಳಿ ಪಶುಗಳಿಗೆ ಕಟ್ಟಿದ ಹುರುಡಿನ ಕಲ್ಲೆ ॥ ೬೩–೯ ॥

ಆತನ ಪ್ರಕಾರ ಜಂಗಮವೆ ಪರವೆಂದು ಲಿಂಗದ ನುಡಿ ಸಾರುತ್ತಿದೆ. ಆದರೆ ತಮ್ಮಂಗ ಲಿಂಗವ ಕಾಣದ ಭ್ರಷ್ಟರೂ ಇದ್ದಾರೆ. ಅಂತಹವರು :

ಅಂಗದ ಮೇಲೆ ಭಸಿತರುದ್ರಾಕ್ಷಿಯಿಟ್ಟು
ಹಂದಿಗಳಂದದಿ ತಿರುಗುತ್ತಲಿಹರು

ಅಂಗದೊಳಗೆ ಗುರುಲಿಂಗವ ಧರಿಸಿಹ
ಶರಣನ ಸಂಗರಿಗೆ ಸರಿಬಾಹರೆಲವೊ ॥ ೩೭–೧ ॥

ಶರಣನಾದವನು ನಾನು ನೀನೆಂಬ ಸಂಶಯವಳಿದ ಸಂಧಾನಿಯಾಗಿರಬೇಕು. ಶರಣಸತಿ ಲಿಂಗಪತಿಭಾವದಲ್ಲಿ ನೆಲೆನಿಲ್ಲಬೇಕು. ಏಕೋದೇವನೆಂಬ ಬಿರುದನ್ನು ಜೋಕೆಯಿಂದ ಪಾಲಿಸಬೇಕು. ಇತರ ದೈವಗಳನ್ನು ನಂಬದಿರಬೇಕು, ಅವನ ಪ್ರಕಾರ :

ನಾರಾಯಣನೆ ಜೋಗಿ ಬ್ರಹ್ಮಜಂಗಮವಾಗಿ
ರುದ್ರನೆ ಶ್ರವಣನಾಗಿರ್ದನಾಗಿ ಸನ್ಯಾಸಿ ಈಶ್ವರ
ಸದಾಶಿವ ಕಾಳಾಮುಖಿಯು ಪರಮೇಶ್ವರನೆ
ಪಶುಪತಿಯಾಗಿರ್ದ ಇವರಾರುಮಂದಿ ಭವಕಂಜಿ
ಭಜಿಸಲು ಚರಮಗುರು ಗೋಹೇಶ್ವರಲಿಂಗ ತೋರಲಿಲ್ಲ ॥ ೩೭–೧೧ ॥

ಕರಿಬಸವೇಶ್ವರನ ವಚನಗಳಲ್ಲಿ ಅನ್ಯಮತವಿಡಂಬನೆಯಿದೆ. ಭವಿಗಳ ಅವಹೇಳನವಿದೆ. ಕಾವೇರಿಯೊಳು ನರಬೇಂಟೆಯನಾಡಿದ ಕುರುವಿದ್ದೀಗ ಅಂದು ವೀರಮಡಿವಳಯ್ಯಕೊಂದ ಕೊಲೆಯಿದೀಗ–ಎನ್ನುವ ಮಾತಿನಲ್ಲಿ ವೀರಮಾಹೇಶ್ವರ ನಿಷ್ಠೆಯ ನಿಲುವು ನಿಚ್ಚಳವಾಗಿ ಕಾಣುತ್ತದೆ :

ಕೊರವನು ಕರಿವೀರ ಬಸವ್ವಗನು
ಕೊರದು ಕರ್ಮವನು ಕತ್ತರಿಸುವನು
ಹರಿಹರಬೊಮ್ಮನೆಂದೆಂಬ ಸಿಂಗಳೀಕನ
ಸರಪಣಿಯೊಳಗೆ ಕಟ್ಟಿ
ಧರಣೀಶ ವಸವಂತರಾಯನೊಬ್ಬನೆಯೆಂದು
ಕರುಣಸುತ ಬಂದಿಹ ಪರಮದೇಶಿಕನಾಗಿ ॥ ೧೨೪–೨ ॥

ಎನ್ನುವಲ್ಲಿ, ಕುರುಬ ದೊಣ್ಣೆಯ ಹಿಡಿದುಕೊಂಡು ಬಂದ ಎನ್ನುವ ಸ್ವರವಚನದ ಭವಿ ಭ್ರಮಿತನೆಂದೆಂಬ ಮಂಡಕೆಯನೊಡೆದು (೩೮–೧) ಎನ್ನುವಲ್ಲಿ ಅವನ ಮನೋಧರ್ಮ ವನ್ನು ಕಾಣಬಹುದಾಗಿದೆ.

ಸಾಧಕನು ಪರಮಾತ್ಮ ಸಾಕ್ಷಾತ್ಕಾರಕ್ಕಾಗಿ ಸತಿಪತಿಭಾವವನ್ನು ಅನುಭವಿಸುವು ದುಂಟು. ವಿರಹಿಣಿ ಪ್ರಾಣನಾಯಕನಿಗಾಗಿ ಹಂಬಲಿಸುವ ಭಾವ :

ಇಂತು ಮುನಿವರೆ ನೀನು ಇನ್ನು ನೀನುಳಿಯೆ ಮುಂದೆ
ಸಂತವಿಟ್ಟುಳುಹೊ ಬಂದು ಸದ್ಗುಣ ಸಿಂಧು ॥ ೯೫ ಪಲ್ಲ ॥
ಪ್ರಾಣನಾಯಕ ಬಾರೊ ಮನೆಗೆ
ಕಾಣದಿರಲಾರೆ ಕಾತುರ ಹೆಚ್ಚಿತೆನಗೆ ॥ ೯೭ ಪಲ್ಲ ॥

ಎನ್ನುವ ಸ್ವರವಚನಗಳಲ್ಲಿ ವರ್ಣಿತವಾಗಿದೆ.

'ಶಿವಯೋಗ' ಇಲ್ಲಿ ಪ್ರತಿಪಾದಿತವಾಗಿದೆ. ಕುಂಡಲಿನಿಸರ್ಪ ಜಾಗೃತವಾಗುವ ಬಗೆಯನ್ನು ಹೀಗೆ ವರ್ಣಿಸಿದೆ. ಸಾಧಕನು ದೈಹಿಕವಾಗಿ ಕೃಶನಾಗಿರುತ್ತಾನೆ. ಅವನನ್ನು

ಒಣಗಿದ ಮರ ಎನ್ನುವ ರೂಪಕದ ಮೂಲಕ ವರ್ಣಿಸಲಾಗಿದೆ. ಆ ಮರದಲ್ಲಿ ಆಡುವ ಸರ್ಪ ಕುಂಡಲಿನಿ ಸರ್ಪ. ಅದರ ವಿವರಗಳು ಹೀಗಿವೆ :

ಒಣಗಿದ ಮರನೊಳಗೆ ಒಂದು ಸರ್ಪನು ಹೊರಟು
ಹೆಡೆಯೆತ್ತಿ ಆಡಿ ನಲಿಯಿತ್ತು, ಆ ಸರ್ಪ
ಹಿಡಿವರ ಕಾಣೆನೆಂದಡಗಿತ್ತು ॥ ೫೧–೩೫ ॥

ಅಡಗಿದ ಸರ್ಪವ ಹಿಡಿದೆತ್ತಿ, ಸಂಗಯ್ಯ
ಮೃಡಭಕ್ತರೆಲ್ಲ ಹಾಲೆರೆಯೆಂದು ಮಹದೇವಿ
ಮಡದಿ ತಂದೆರೆದು ತನಿವಾಲ ॥ ೫೧–೩೬ ॥

ತನಿವಾಲ ಸವಿವುತ್ತ ತನ್ನ ತಾ ನೋಡುತ್ತ
ತಾನೆ ತಾನಾದವರ ನೆನೆವುತ್ತ, ಹೊಗಳುತ್ತ
ದೇವೇಶಸರ್ಪ ಮೊರೆವುತ್ತ ॥ ೫೧–೩೭ ॥

ಮೊರೆವ ಸರ್ಪವ ಕಂಡು ಮೂಜಗವು ಉರಿದೆದ್ದು
ತರಿದಾಡಿ ತಮ್ಮೊಳಿರಿದಾಡಿ ಸುರಿದಾಡಿ
ಮರುಳುತಂಡಗಳೆಲ್ಲ ಕುಣಿದಾಡಿ ॥ ೫೧–೩೮ ॥

ಮರೆದು ಡರ‍್ರನೆ ತೇಗಿ ಮರುಳುತಂಡಗಳೆಲ್ಲ
ಮರುಭೂ ಭಾಪುರೆಂದು ನಲಿದಾಡಿ ಪಿಡಿದಿರ್ದ
ಅಜಕಪಾಲವು ತುಂಬಿ ತುಳುಕಾಡಿ ॥ ೫೧–೩೯ ॥

ಈ ಸಂವತ್ಸರ ತೀರಿತಾ ಸಂವತ್ಸರ ಬಂದಿ
ತಾ ಸಂವತ್ಸರದೊಳಗಾನಂದದ ಶಿವಯೋಗ
ದೇಶಪಾಲಿಪನ ವಸಗೆಯು ॥ ೫೧–೪೦ ॥

ಇಂತಹ ಸಾಧನೆಯನ್ನು ಮಾಡಿ ಸಿದ್ಧಿಯನ್ನು ಪಡೆದವನು ಕರಿಬಸವಾರ್ಯ. ಅವನು ಶಿವಯೋಗವನ್ನು ಸಾಧಿಸಿದುದಕ್ಕೆ ಸಾಕ್ಷಿಯಾಗಿ ;

ಭೋಗದ ಯೋಗದ ನೆಲೆಯನು
ಕಾಗೆಯು ತಾವೇನಬಲ್ಲೊ ಕೋಗಿಲೆಗಲ್ಲದೆ
ಕೋಗಿಲು ಕರಿಬಸವಾರ್ಯನು
ಶಿವಯೋಗವ ತಾವೇನ ಬಲ್ಲೊ ಕಾಗೆವಿಂಡು ॥ ೬೧–೪ ॥

ವಚನಕಾರರು, ಹರಿದಾಸರು ತಮ್ಮ ಅಭಿವ್ಯಕ್ತಿಗಾಗಿ ತುಂಬ ಸರಳವಾದ ಭಾಷೆಯನ್ನು ಬಹುಪಾಲು ಅವಲಂಬಿಸಿದ್ದಾರೆ. ಜನಸಾಮಾನ್ಯರಿಗೆ ತಮ್ಮ ಅನಿಸಿಕೆಯನ್ನು ತಲುಪಿಸುವುದು ಅವರ ಉದ್ದೇಶ. ದೈನಂದಿನ ನಡವಳಿಕೆಗಳನ್ನು ಹೇಳುವಲ್ಲಿ, ಧರ್ಮದ ಸ್ವರೂಪವನ್ನು ತಿಳಿಸುವಲ್ಲಿ, ತಮ್ಮ ಧರ್ಮದ ಅನುಯಾಯಿಗಳನ್ನು ಸಿದ್ಧಪಡಿಸುವ ಸಂದರ್ಭದಲ್ಲಿ ಜನಸಾಮಾನ್ಯರಿಗೆ ಅರ್ಥವಾಗುವಂತಹ ಭಾಷೆಯನ್ನು ಬಳಸಿದ್ದಾರೆ.

ಉಪಮೆ, ರೂಪಕ, ಗಾದೆ ಮುಂತಾದ ಭಾಷಿಕ ಸಂಪತ್ತನ್ನಲ್ಲದೆ ವಚನ, ತ್ರಿಪದಿ, ಸಾಂಗತ್ಯ, ಕೀರ್ತನೆ, ಹಾಡುಗಳು ಮುಂತಾದ ಸರಳ ಛಂದೋರೂಪಗಳನ್ನು ಬಳಸಿದ್ದಾರೆ. ಆದರೆ ತಮ್ಮ ಧರ್ಮಕ್ಕೆ ಸಂಬಂಧಿಸಿದ ಅನುಭಾವ ವಿಚಾರಗಳನ್ನು ಹೇಳುವಾಗ, ವ್ಯಕ್ತಿಯು ವೈಯಕ್ತಿಕ ಸಾಧನೆ ಸಿದ್ಧಿಗಳ ಮಾರ್ಗವನ್ನು ತಿಳಿಸುವಾಗ ಬೆಡಗನ್ನು ಆಶ್ರಯಿಸಿದ್ದಾರೆ. ಶರಣರ ಬೆಡಗಿನ ವಚನಗಳು, ಹರಿದಾಸರ ಮುಂಡಿಗೆಗಳು ಇದಕ್ಕೆ ಸಾಕ್ಷಿ. ಪ್ರಸ್ತುತ ಕೃತಿಯಲ್ಲಿ ಕೂಡ ಬೆಡಗನ್ನು ಕಾಣಬಹುದಾಗಿದೆ :

ಜಾಣಗುರು ಕರಿಯಬಸವೇಶನಾಡುವ ಬೆಡಗು
ವಾರಗಳಿಗೆ ಕಾಣಬಾರದಿಹುದು ॥ ೩೭–೮ ॥

ಎನ್ನುವ ಮಾತಿನಲ್ಲಿ ಬೆಡಗಿನ ಸ್ಪಷ್ಟ ನಿರ್ದೇಶವಿದೆ. ಬೆಡಗನ್ನು ಒಡ್ಡುವುದಲ್ಲದೆ ಅದನ್ನು ಬಿಡಿಸುವ ಕೆಲಸವನ್ನು ಕೂಡ ಈ ಕೃತಿಕಾರ ಮಾಡಿರುವುದನ್ನು ಕಾಣಬಹುದು.

ಕಾಗೆ ಹದ್ದ ನುಂಗಿ ಗೂಗೆ ಹುಯ್ಯಲನಿಕ್ಕಿ
ಗಾದೆಯ ನುಡಿದ ಬಸವಣ್ಣನಾಗಮವ
ಆದಿಯ ಕಾಣಲರಿಯರು ॥ ೫೧–೨೪ ॥

ಹರನರಿಯದುದೇ ಹದ್ದು ಕರ್ಮವೆಂಬುದೆ ಕಾಗೆ
ಧರ್ಮವೆಂಬ ಗೂಗೆ ಹುಯ್ಯಲಿಕ್ಕೆ ಅಹಹಾ
ಆ ಕಾಗೆ ನುಂಗಿ ಅಳಿಯಿತ್ತು ॥ ೫೧–೨೫ ॥

ಈ ಬಗೆಯ ಬೆಡಗಿಗೆ ೮೮ ನೆಯ ಸ್ವರವಚನ ಒಂದು ಉತ್ತಮ ಉದಾಹರಣೆ. ತನ್ನ ಜೀವಿತದುದ್ದಕ್ಕೂ ಈ ಬಗೆಯ ಸಾಧನೆಯಲ್ಲಿ ತೊಡಗಿದ ಕರಿಬಸವೇಶ್ವರನು ಸಿದ್ಧಿಯನ್ನು ಸಾಧಿಸಿದುದಾಗಿ–ಸತ್ತಿತೆನ್ನಯ ಅರುಮರವೆಯು (೩೧–ಪಲ್ಲ) ಎನ್ನುವ ಮಾತಿನಲ್ಲಿ ಹೇಳಿದ್ದಾನೆ. ಮುಂದುವರೆದು :

ಅಗಲದ ಯೋಗವ ಮಾಡಿ
ಮೃಗನೇತ್ರೆಯೊಡಗೂಡಿ
ಜಗದೊಳು ಕರಿಬಸವಾರ್ಯನೊಬ್ಬನೆಯೆಂದು
ಜಗಜಗಿಸಿತು ಜಗವು ॥ ೮೬ ಪಲ್ಲ ॥

ಎನ್ನುವ ಮಾತಿನಿಂದ ತಿಳಿದುಬರುತ್ತದೆ.

ಪರಶಿವನ ೨೫ ಲೀಲೆಗಳ ಅನಂತರ ಬಂದದ್ದು ಕರಿಯ ಬಸವೇಶ್ವರನ ೨೬ನೆಯ ಲೀಲೆ. ಈತನ ಲೀಲೆ :

ಕರಿಯಬಸವರಾಜ ಕರ್ಮಕೋಳಾಹಳ
ಮರುಳಾಟದ ಲೀಲೆ

ಮರುಳುತಂಡವ ಕೂಡಿ ಗುರುಸಿದ್ಧ ಬಸವೇಶ
ಉರಿಲಿಂಗಾದೊ ಭಾವ ॥ ೬–೨ ॥

ಈತನು ತನ್ನ ಸ್ವರವಚನಗಳಲ್ಲಿ ಜನತೆಗೆ ತಿಳಿಯಹೇಳಿರುವುದು :

ಧರೆಯೊಳು ಭಕ್ತಿಯ ವಿವರವ ತೋರುತ್ತ
ಕರಿಯಬಸವನೊಳಗೆ
ಗುರು ಕೂಡಲ ಚೆನ್ನಸಂಗಯ್ಯ ನಿರ್ವಾಣ
ದಿರವ ತಾ ಪೇಳಿದನು ॥ ೭–೧೫ ॥

ಎನ್ನುವ ಮಾತಿನಂತೆ ಗುರು ಕೂಡಲಚೆನ್ನಸಂಗಯ್ಯನು ಕರಿಬಸವನಿಗೆ ಹೇಳಿದ ನಿರ್ವಾಣ ದಿರವು. ಇದನ್ನು ಸಾಧಿಸಬೇಕಾದರೆ :

ಲಿಂಗವ ಹಾಡಿರೊ ಲಿಂಗವ ಬೇಡಿರೊ
ಲಿಂಗವ ನೀವು ನೋಡಿ ಸುಖಿಯಾಗಿ ಬದುಕಿರೊ
ಸಂಗಯ್ಯನಾಣೆ ಪುಸಿಯಲ್ಲ ॥ ೫೧–೪೧ ॥

ಎನ್ನುವ ಭರವಸೆಯ ನುಡಿಯನ್ನು ಅವನು ಹೇಳಿದ್ದಾನೆ. ಕರಿಬಸವೇಶ್ವರನ ಸ್ವರವಚನ ಗಳನ್ನು ಅಧ್ಯಯನ ಮಾಡುವ ಮೂಲಕ, ಪಾರಾಯಣಮಾಡುವ ಮೂಲಕ ಜನತೆಯ ಉದ್ಧಾರ ಸಾಧ್ಯವಾಗುತ್ತದೆ.

ಪರಮ ಪೂಜ್ಯ ಲಿಂಗೈಕ್ಯ ಜಗದ್ಗುರು ಡಾ. ಶ್ರೀ ಶಿವರಾತ್ರಿ ರಾಜೇಂದ್ರ ಮಹಾ ಸ್ವಾಮಿಗಳು, ವೀರಸಿಂಹಾಸನಮಠ, ಸುತ್ತೂರು ಅವರ ಯೋಜನೆಗಳನ್ನು ಮುಂದು ವರಿಸಿಕೊಂಡು ಬಂದಿರುವುದಲ್ಲದೆ ಹಲವಾರು ಹೊಸ ಯೋಜನೆಗಳನ್ನು ಹಾಕಿಕೊಂಡು ಸಮರ್ಥವಾಗಿ ಕಾರ್ಯರೂಪಕ್ಕೆ ತರುತ್ತಿರುವ ಪರಮಪೂಜ್ಯ ಜಗದ್ಗುರು ಶ್ರೀ ಶ್ರೀ ಶಿವರಾತ್ರಿದೇಶಿಕೇಂದ್ರ ಮಹಾಸ್ವಾಮಿಗಳವರು ಸಮಗ್ರ ಸ್ವರವಚನ ಸಾಹಿತ್ಯ ಪ್ರಕ ಟನೆಯ ಮೂಲಕ ಮೂರನೆಯ ಸಂಪುಟವಾಗಿ 'ಕರಿಬಸವೇಶ್ವರನ ವಚನ' ಕೃತಿಯನ್ನು ಹೊರತರುತ್ತಿದ್ದಾರೆ. ನನ್ನ ಮೇಲೆ ಕೃಪೆಯಿಟ್ಟು ಅವರು ನಿಯೋಜಿಸಿದ ಈ ಕಾರ್ಯ ಸಂತೋಷವನ್ನುಂಟುಮಾಡಿದೆ. ಅವರ ಅಡಿದಾವರೆಗಳಿಗೆ ಶರಣಾರ್ಥಿಗಳು. ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡದ ಕನ್ನಡ ಪ್ರಾಧ್ಯಾಪಕ ಡಾ. ಎಂ. ಎಂ. ಕಲಬುರ್ಗಿ ಯವರು ಈ ಕಾರ್ಯದಲ್ಲಿ ಒತ್ತಾಸೆ ನೀಡಿದ್ದಾರೆ. ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯ ಸಂಪಾದನ ವಿಭಾಗದ ಉಪನಿರ್ದೇಶಕರಾದ ಶ್ರೀ ಮೈಲಹಳ್ಳಿ ರೇವಣ್ಣ ಅವರು ಹಸ್ತ ಪ್ರತಿಗಳನ್ನು ಒದಗಿಸಿದ್ದಾರೆ. ಈ ಮಹನೀಯರಿಬ್ಬರಿಗೂ ವಂದನೆಗಳು.

ಕನ್ನಡ ಜನತೆ ಈ ಕೃತಿಯನ್ನು ಸ್ವೀಕರಿಸುವರೆಂದು ನಂಬಿದ್ದೇನೆ.

## ಹಸ್ತ ಪ್ರತಿಗಳ ವಿವರ

ಕರಿಬಸವೇಶ್ವರನ ವಚನ ಎನ್ನುವ ಕೃತಿಯನ್ನು ಮೈಸೂರು ವಿಶ್ವವಿದ್ಯಾನಿಲಯದ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯ ಸಂಪಾದನ ವಿಭಾಗ ಕೆ. ೮೩೩ ಮತ್ತು ಕೆ. ಎ. ೫೦೪ ಸಂಖ್ಯೆಯ ಹಸ್ತಪ್ರತಿಗಳಿಂದ ಸಂಪಾದಿಸಿದೆ.

ಕೆ. ೮೩೩ ತಾಳೆಗರಿಪ್ರತಿ. ೯.೫" ಉದ್ದ ಮತ್ತು ೧.೭" ಅಗಲವಿದೆ. ೧-೬೩ ಪತ್ರಗಳಿವೆ. ಪ್ರತಿಯೊಂದು ಪತ್ರದಲ್ಲಿ ೧೧ ಪಂಕ್ತಿ ೫೨ ಅಕ್ಷರಗಳಿವೆ. ಆರಂಭದಲ್ಲಿ "ಶ್ರೀ ಗುರು ಕರಿಬಸವರಾಜ ದೇವರು ನಂಜಾಂಬಿಕೆಯರ ಪಾದಕೆ ಶರಣಾರ್ತಿ. ಶುಭಮಸ್ತು ಶೋಭನಮಸ್ತು ಆಯುರಾರೋಗ್ಯ ಐಶ್ವರ್ಯಮಸ್ತು ಕರಿಬಸವೇಶ್ವರನ ವಚನದ ಪುಸ್ತಕ" ಎಂದಿದ್ದು ಮುಂದೆ ಹಾಡುಗಳನ್ನು ಬರೆಯಲಾಗಿದೆ. ಅಂತ್ಯದಲ್ಲಿ "ಶ್ರೀ" ಎನ್ನುವುದನ್ನು ಬಿಟ್ಟರೆ ಬೇರೆ ಯಾವ ವಿಧವಾದ ವಿವರ ಇಲ್ಲ.

ಕೆ. ಎ. ೫೦೪ ಕಾಗದದ ಹಸ್ತ ಪ್ರತಿ. ಕೆ. ೮೩೩ ರಿಂದ ಪ್ರತಿಮಾಡಲಾಗಿದೆ. ೧-೧೧೬ ಪುಟಗಳಿವೆ, ೯.೧" ಉದ್ದ ಮತ್ತು ೧೦.೨" ಅಗಲವಿದೆ. ಪ್ರತಿಯೊಂದು ಪುಟದಲ್ಲಿಯೂ ೨೦ ಪಂಕ್ತಿ ೨೬ ಅಕ್ಷರಗಳಿವೆ. ವಿಶೇಷವೇನಿಲ್ಲ.

ಜಿ. ಜಿ. ಮಂಜುನಾಥನ್

॥ ಶ್ರೀ ॥

# ಕರಿಬಸವೇಶ್ವರನ ವಚನ

೧

ರಾಗ ॥ ತೆಲುಗ ಕಾಂಬೋದಿ

ಮಾಯ ಮೋಹಕೆ ಸಿಕ್ಕಿ ಕೆಡಬೇಡ
ಜೀವ ಪ್ರಾಣಿಗಳು ನೀವು
[ಮಾಯಾ] ರಹಿತನ ಭಜಿಸಿರೊ ನೀವು
ಧಾರುಣಿಯು ಭೋಗವಲ ॥ ಪಲ್ಲ ॥

ಹರಿ ಮುನಿಯು [ಶಾಪ]ದಿಂದ
[ವರ] ದೇವತ್ವಕಡೆಯಾದ ಪರಿಯರಿಯಿರಿ
ಹರನ ಕೃಪೆ ತಪ್ಪಿದಲಿ ಹರಿ ಹತ್ತುಭವ ಬಂದ
ತೆರನ ನೀವು ಕೇಳಿರೆಲವೊ ೧

ಬ್ರಹ್ಮನು ಹಮ್ಮು ನುಡಿದ ಕಾರಣವು
ನಿರ್ಮಳದ ಕಳೆಹೋಯಿತು
ಬ್ರಹ್ಮಾಂಡಕಧಿಕನನು ಜರೆದ ಕಾರಣದಿಂದ
ನಿರ್ಮಲದ ಶಿರ ಹೋಯಿತು ೨

ಇಂದ್ರನು ಕಾಮಿಸಿದನು ಪರಸತಿಯು
ಅಂದಕ್ಕೆ ಮರುಳಾಗಿಯೆ
ಕಂದುಗೊರಳನ ಕೃಪೆಯು ತಪ್ಪಿದಲಿ ಮೈಯೆಲ್ಲ
ಅಂದುಳ್ಳ ಭಗವಾಯಿತು ೩

ಕಲಿಪಾರ್ಥನೆನಿಸುತಿಹನು ಕೀಚಕನ
ಬಲುಹೆಲ್ಲಿ ಹೋಯಿತೆಲವೊ
ಅನ್ಯಲಲನೆಯನು ಕಾಮಿಸಿದ ತೆರದಿಂದ
ಕಲಿಭೀಮ ಬಲುಹಿಂದ ಕೊಂದನೆಲವೊ ೪

ರಾವಣನು ಸೀತೆಗಳುಪಿ ಕಾತುರದಿ ಪೇ
ತಾದ ತೆರನರಿಯಿರಿ
ರಾಮೇಶಲಿಂಗವನು ಜರಿದ ಕಾರಣದಿಂದ
ರಾವಣನು ಅಂತಾದನು ೫

ಧರೆಯ ವಿಶ್ವಾಮಿತ್ರನು ಕರ್ಣ
ಕೌರವರು ಏನಾದರು
ಕಣ್ಣಿಳ್ಳ ಬಲು ಬಾಲಿಯು ಹೆಣ್ಣಿಂದ ಮಡಿದುಂದನು
ಚೆನ್ನಾಗಿ ಕೇಳಿರೆಲವೊ ೬

ವೇದಗಳನೋದುತಿಹರಿ ಧರ್ಮದ
ಹಾದಿಗಳ ಕಾಣದಿಹರಿ
ಬಾಧೆಗೊಳಗಾಗುತಿಹರಿ
ಭೇದಿಸುವ ಆದಿನಾಥನ ಕಾಣರಿ ೭

ಧರೆಯ ಜೀವಗಳಿರಾ ನೀವೆಲ್ಲ
ಕುರಿಯಂತೆ ಕೇಳಿರೆಲವೊ
ಶರಧಿ ಮೇರುವೆ ತಪ್ಪಿ ಬರುವಾಗ ಸರಕಿಗಳು
ಸರ್ವೇಶಯೆನುತಿಹರಿ ೮

ಅಂತವರು ಅಂತಾದರು ನೀವೆಲ್ಲ
ಕಂತುಹರನನು ಭಜಿಸಿರೊ
ಪಂಥವಿಟ್ಟಾರು ಮುಂದೆ ತಮ್ಮ
ಪಂತವಡರಿದವಗೆ ೯

ಅಚ್ಚ ಶಿವಭಕ್ತನಾಗಿ ಶರಣರ
ಇಚ್ಛೆಗೆ ತಾನೆ ಸಿಕ್ಕಿ
ಕರ್ತು ನಿಜಗುರು ಶಾಂತ ಭಕ್ತಿಗಳ
ಮುಕ್ತಿಗಳ ಯುಕ್ತಿಗಳ ಕಲಿಸುತಿಹನು ೧೦

೨

ಕೇಳಿರೈ ಭ್ರಷ್ಟರೆಲ್ಲರಿಗೆ ಭವಹರ ಬಂದ
ಧಾಳಿ ಹೊರಟನು ಚೆನ್ನಬಸವಡಣ್ಣಾಯಕನು
ತೋಳ ಹೊಯ್ಯುತ್ತ ಕೋಪದಲಿ ಆರ್ಭಟಿಸುತ್ತ
ಕಾಳಬಸವೇಶ ಕಲಿಯುಗಕೆ ಬಂದುದನು ॥ ಪಲ್ಲ ॥

ಸಂಗಮೇಂದ್ರನೊಡ್ಡೋಲಗದಿ ಷಣ್ಮುಖನೆ ಬಾರೆಂದು
ಕರೆದಿತ್ತೆನ್ನ ತಂದೆ ಶಂಕರನು
ಕುಂಭಿನಿಗೆ ಅಪ್ರತಿಮನೆಂಬ ಪೆಸರಂ ಕೊಟ್ಟು
ತುಂಬಿ ಬಾಯೊಳಗೆ ಬಾಯಿಟ್ಟು ತಾಂಬೂಲವ
ಗೊಂಬೆ ಬಿದ್ದಿತು ಕಂಬಮುರಿದು ಲಾಗವು ತಪ್ಪಿ

ಡೊಂಬಿಗಿಕ್ಕೆಂದು ಕಳುಹಿದನು ಮಡಿವಳನು
ಆ ಲಿಂಗಬಸವನ ಲೀಲೆಯೊಳಗಾಡುತಿಹ
[ಆ ಲಿಂಗ] ಜಂಗಮವೆ ಪರವೆಂದು ಡಂಗುರವ ಹೊಯ್ದ ೧

ಕರ್ಪೂರದ ಉರಿಯಂತೆ ಕತ್ತುರಿವ ವಸವಂತ
ಮುಪ್ಪುರವ ಸುಟ್ಟಂತ ಅಪ್ರತಿಮನೀತ
ಚಿಕ್ಕ ಬಸವನು ಚಿಕ್ಕವೀರೇಶ ಪ್ರಭು ಬಂದ
ಹೊಕ್ಕು ತುಳಿವ್ರತ ಸೊಕ್ಕಿದಸುರ ನರಕಿಗಳ
ದಿಕ್ಕುದಿಕ್ಕಿನ ಭೂತತತಿಗೆ ವೀಳ್ಯವನಿತ್ತು
ಅಪ್ರತಿಮನಲ್ಲದಿಲ್ಲೆನುತ ಧರೆಯೊಳಗೆ
ಭಕ್ತರಿಗೆ ಭೃತ್ಯಯಿವ ಚಿಕ್ಕಮಡಿವಳನೀತ
ಚಿಕ್ಕ ಪ್ರಭುವೆಂದೆನಿಸಿ ಬಂದ ಚಿಕ್ಕ ಸಿದ್ಧ ೨

ಹೊಟ್ಟು ಹಾರಿತು ಗಟ್ಟಿ ಉಳಿಯಿತೆಂಬ ನುಡಿಯು ಕೇಳಿ
ನಷ್ಟವನು ಗಳಿಸಿ ಲಾಭವ ಮರೆದಿರಲ್ಲ
ದಿಟ್ಟರಾಗಿದ್ದವರು ಇಷ್ಟಲಿಂಗವ ನೋಡಿ
ಕೊಟ್ಟುರುಹ ಬಸವೇಶ ಪಟ್ಟಕ್ಕೆ ನಿಂದ
ಕಟ್ಟಕಡೆಯಾಟವಿದು ಕೊಟ್ಟು ಕಲ್ಪನೆ ಬಂದ
ಸೃಷ್ಟಿಯೊಳು ವೀರವಸವಂತನೆಂದೆನಿಸಿ
ಮುಟ್ಟಿ ಪೂಜಿಸಿದವಗೆ ಇಷ್ಟಸಿದ್ಧಿಯ ಕೊಡುವ
ಕಪ್ಪಡಿಯ ಸಂಗಮೇಶ್ವರ ಪೇಳ್ದ ನುಡಿಯು ೩

೩

ರಾಗ॥ ನಾಟಿ

ಬಂದನೆನ್ನಯ ಕೃಪಾಸಿಂಧು ಧರೆಗಿಳಿದು
ಬಂದಂದವನ್ನೇನೆಂಬೆ ನಂದಿಕೇಶ್ವರನು
ನಿಂದಕರ ಮೆಟ್ಟಿ ತಾಮಸ ಮಾಯಕೋಳಾಹಳ
ತಾಂಡವವಾಡಿದನು ಮಚ್ಚಂದ್ರಶೇಖರನು ॥ ಪಲ್ಲ ॥

ಮೊಲದಬೇಂಟೆಯ ಹೊರಟ ಕರಿಬಸವದಂಡೇಶ
ಹಲವು ಪರಿ ಮೃಗದ ಬಲುಗಜದ ಹಿಂಡಿನೊಳಪೊಕ್ಕು
ತೆಲುಗ ಜೊಮ್ಮಯ್ಯ ಸಹವಾಗೀಗ
ಹುಲಿ ಕರಡಿ ಕಪಿಗಳನು ಕೊಲುತ ನಮ್ಮಯ್ಯ
[ಹರಕೆಯನು ತಾ] ಮಾಡಿ ಬಾಳು ಬಾಳೆಂದೆನುತ
ಕರಿಯುಗವ ಕಡಿದ ಕಲಿಕಾಮುಸಹವಾಗಿ

ಒಲು ಜಾವಲಿಯು ಬಿಟ್ಟು ಬ್ರಹ್ಮಾಂಡದೊಳಗೆಲ್ಲ
ಮೊಲದ ಬೇಂಟೆಗೆ ಹೊರಟ ಚೆಲುವ ನಮ್ಮಯ್ಯ ೧

ಈತ ಬಂದಿಹನು ಕೇಳಾ ಪರಮಾತೀತನಂ
[ಮಾತಿಗೆಟುಕದ] ನಿರಾಕಾರ ನಮ್ಮಯ್ಯ
ಸಾಕಾರವಡಗಿ ಸಂದೇಹವಳಿದಾನಂದ
ಕಾಕುಮಂನುಜರನೊದೆದ ಕರಿಯ ಬಸವ್ವಗನು
ಭೂತಳಕೆ ಪೊಸತೀತ ಭೂರಿದೈವದಗಂಡ
ಜಾತಿಸೂತಕವಳಿದಜಾತಲಿಂಗದೊಳು
ಏಕವಾಗಿಯೆ ಲಿಂಗಿಸಂಗ ಸಮರಸವಾಗಿ
ಆ ಪರಮಾತೀತ ಭಕ್ತರಿಗೆ ಆನಂದ ೨

ಕಾಲಕರ್ಮದಗಂಡ ವಿಧಿಯ ವಿಪರೀತವಿಂಡ
ನೀಲಕಂಠನ ತೋಂಡ [ಭವಿಜೀವರುದ್ದಂಡ]
ಭೂಲೋಕದೊಳಗೆ ಒಲುಬಿರಿದೆತ್ತಿ ಸಾರಿದನು
ನೀಲಲೋಚನೆಯುಪತಿ ಆಳಿನಾಳೆಂದು
ಬಾಲಲೀಲೆಯೊಳಂದು [ನಿಂದನು] ಕೇಳಿರೆಲೊ
ಮೇಳೈಸಿ ಶರಣಬಲವಂ ಕೂಡಿಕೊಂಡು
ಕಾಳಬಸವ್ವಗನೆಂಬ ಬಿರಿದ ಕಾಲೊಳು ಕಟ್ಟಿ
ಭಾಳಲೋಚನ ಬಸವ ತಾನೆ ತಾನಾಗಿ ೩

ವಿಟನು ವಿದ್ವಾಂಸ ನಟ ನಾಟಕ ಕರಿಯಬಸವ
ಕುಟಿಲ ಕೋಲಾಹಲ ದೀಕ್ಷಿತನಹುದಲವ್ವೊ
ವಟವೃಕ್ಷ ಓಂಕಾರ ಬಸವ ಭವ ಭಯದೂರ
ನಿಟಿಲಾಕ್ಷ ಜಗವ ಪುಟ್ಟಿಸಿದ ವಿನೋದ
ಆ ನಟಣೆಯಿಂ ನಾ ಬಂದೆ ವಿಟವೇಷವನು ತಾಳಿ
ಪ್ರತಿಯಿಲ್ಲದಪ್ರತಿಮನೆಂಬ ವಾರ್ತೆಯನು
ದಿಟನೆಂದು ತೆಕ್ಕೊಂಬ ಆ ಪದಸ್ತ್ರೆಯರುಗಳ
ಸಟೆಸಟೆಯೆನಿಪ ಸೂಳೆಗೇರಿಯ ನೋಡುತ ೪

ಬಾರುಕೋಲ್ವಿಡಿದುವನು ಆರು ತಿಳಿಯರು ಕೇಳಿ
ವೀರವಸವಂತನಂ ಧಾರಿಣಿಗೆ ಬಂದ
ಬಾರೆಂಬುದೆ ಬರವು ಕೊಲ್ಲೆಂಬುದೆ ಕೊಲೆಯು
ಕೋಲ್ವಿಡಿದು ಸಾರಿದನು ಕಾರಣಿಕನೆಂದು
ಧೀರ ಅಸಹಾಯ ಮಾರ್ಮಲೆತ ವೈರಿಯ ಗಂಡ
ವೀರವಿತರಣ ಸರಳ ಶರಭಭೇರುಂಡ

ಕ್ರೂರವಮನುಜರ ಕುಕಿಲೊಳಿತ್ತಿ ಸಟ್ಟಿನೆ ಸೀಳ್ವ
ವೀರಬಸವೇಶ ವಿಪರೀತ ಮಹಾಮಹಿಮ ೫

ಲಿಂಗಲಿಂಗ[ವೆಂದು ಪೆಸ]ರಿಟ್ಟು ಕೊಂಡಲ್ಲ
ಲಿಂಗವರಿಯದ ಭಂಗಿತರ ಮುಖವ ಕಂಡು
ಅಂಜಿತ್ತುಯೆನ್ನ ಮನ ನಾಚಿತ್ತು ಸಮ್ಮಯ್ಯ
ಅಂಜಬೇಡೆಂದಭಯವಿತ್ತು ಪೇಳಿದನು
ಹಂದಿಮಾನುಪಗಳಿರ ಲಿಂಗ ನಿಮಗೆಲ್ಲಿಯದೊ
ಗಂಜಳದೊಳಿಹ ಸೂಕರಗೆ ಲಿಂಗವುಂಟೆ
ಆ ಲಿಂಗ ನಿಮಗಿರಲು ಅಂಗ ಬೀಳಲದೇತಕ್ಕೆ
ಲಿಂಗ ಕೂಡಲಚೆನ್ನಸಂಗಬಸವೇಶ ೬

ಆತ್ಮ ಭವಿಯೆಂದೆಂಬ ಅಧಮ ನರಕಿಗಳೆದೆಯ
ಬಾಚಿಯಲಿ ಕಡಿದು ಪೂರ್ವಾಚಾರ್ಯನೆಂದು
ಸೂತಕಿಗಳಿಗೆ ಆತ್ಮನುಂಟೆಂದೆಂಬ
ಆತನಿಕ್ಕಿದನು ಮಂಡೆಯ ಮೇಲೆ ಸೊಡ್ಡ
ಆತ್ಮನೆ ಅಂಗಲಿಂಗವೆಂದೆಂಬ ಲಿಂಗವ ಧರಿಸಿ
ಆತ್ಮಂಗೆ ಅಂಗಲಿಂಗಪ್ರತಿಮನಾಗಿ
ಈ ಕಲಿಯುಗದ ಕಡೆಯ ಕುಂಭಿನಿಯ ಕುಂಭಕ್ಕೆ
ಅಜಾತ ಕೂಡಲಸಂಗಮ ಪರತ್ವವನೇರಿ ೭

ಬಸವಾದಿ ಪ್ರಮಥರೆಲ್ಲರ ಕೂಡಿ ಅಸಮಾಕ್ಷ
ಬಸವನೊಳು ಬಸವ ನವರಸಭರಿತನಾಗಿ
ವಸ[ವಂತ ಕರಿಬಸವ ತಾ] ಬಂದ,
ವಸಗೆಯನು ಬಸವ ಬಸವನ ಲಂಕ ಲೆಂಕರಿಗೆ ಲೆಂಕ
ಹುಸಿಗಳನು ಮರ್ದಿಸುತ [ತಾ] ದಶದಿಕ್ಕಿನೊಳು
ಕಸಗಳನು ಗುಡಿಸಿ ಕಾವೇರಿ ಮಧ್ಯದಾ
[ಹೊ]ಸ ಹಿಡಿಗಲಂ ಪಿಡಿದು ಕರಿಯಬಸವಾಯೆಂದು
ಪೆಸರಿಟ್ಟವ ನಮ್ಮ ಗುರುಗೊಹೇಶ್ವರನು ೮

೪

ಕೊರವಂಜಿ ನಾ ಬಂದೆ ಅರಿವುಳ್ಳ ಶರಣರು
ಮರಸುತ್ತ ಹಾರೈಸಿ ನಾ ಬಂದೆ
ಕೊರವಂಜಿ ನಾ ಬಂದೆ ಅರಿವುಳ್ಳ ಶರಣರ ॥ ಪಲ್ಲ ॥

ರುದ್ರಾಕ್ಷಿಪುಟವಿಡಿದು ನುಡಿಗಳ ಹೇಳುತ್ತ
ಸಿದ್ಧರಾಮಯ್ಯ ನಮ್ಮ ಸದ್ಗುರವು
ಇದ್ದ ಗಣಂಗಳೆಲ್ಲರು ಕೂಡಿಯುನ್ನುವ
ಬುದ್ಧಿ ಮಾಡಿ ತಂದರು ನಮ್ಮ ಶರಣರು
ಸಿದ್ಧಬಸವ ಸಿದ್ಧಗುರು ರೇವಣ್ಣನು
ಸಿದ್ಧವೀರೇಶ ನಮ್ಮ ಹಿರಿಯಣ್ಣ ೧

ಎತ್ತಿ ತಂದರು ತಮ್ಮ ತೊತ್ತಿನ ಮಗಳನು
ಹೊತ್ತೋಡಿಸಿ ಹೋದೆಮ್ಮವರು
ಹೊತ್ತವರಲ್ಲದೆ ಹೊರಿಸಿ ಕೊಂಡವಳಿಗೆ
ಎತ್ತಣ ಭಯವುಂಟು ಮರುಳೆ
ಮುತ್ಯಂಗನೆ ಹಿರಿಯಕ್ಕನ ತೊತ್ತಿನ
ತೊತ್ತಿನ ಮಗಳೆಂದುಸುರಿದನು ೨

ನಿಂದಕ ಹಂದಿಗಳನು ತುಳಿದಾಡುತ್ತ
ನಂದೀಶ್ವರ ನಾಟ್ಯಕೆ ನಿಂದ
ಅಂದವನೆ ಬಾಲಿಯು ಭಂಡಾರಕ್ಕೆ ಬಲಿಗಳನಿತ್ತು
ಲಿಂಗಬಸವ ಕೂಡಲ ಚೆನ್ನಸಂಗನ
ಹಿಂಗದ ಶರಣಂಗೆ ಉಳಿವುಂಟು ೩

೫

ರಾಗ ॥ ತೆಲುಗ ಕಾಂಬೋದಿ

ಕಣಿಯು ಕಣಿಯು ಕೇಳಿರಣ್ಣಗಳಿರ
ಕಣಿಯು ಕೇಳಿರಣ್ಣಗಳಿರ
ಕಣಿಯು ಕೇಳಿರಣ್ಣಗಳಿರ ಕಣಿಯು ಕೇಳಿರೊ
ಕಣಿಯು ಕೇಳಿರಣ್ಣಗಳಿರ
ಬಣಗು ನರಕಿಗಳನು ತುಳಿವ ಹ
ವಣ ಕಂಡು ನಾನು ಬಂದೆ ತ್ರಿಣಯನಾಟದಿ ೧

ಸೋಮನಾಥ ಗಿರಿಜೆಯೊಡನೆ
ಈ ಮಹಿಯೊಳಾಡಬೇಕು
ನೀನು,ದಾಸಿಯಾಗಿ ಪುಟ್ಟು ಸ್ಥಲದ ಮಧ್ಯದಿ
ತಾನು ಚೆನ್ನಬಸವನೆಂಬ
ದಾಸನಾಗಿ ಪುಟ್ಟುತಿಹೆನು
ಗೋಪಕರ್ನ ಮಧ್ಯದಲ್ಲಿ ನಿಂದು ಆಡುವ ೨

ಶಂಕರನು ಗೌರಿದೇವಿ
ಲೆಂಕರಾಗಿ ಪುಟ್ಟಿ ತಾವೆ
ಶಂಕೆಯಿಲ್ಲದಾಡುತಿಹರು ಸಕಲ ಭೋಗದಿ
ವಂಕುಡಿಯನು ಪಿಡಿದು ತಾವೆ
ಕುಂಕುಮದ ಪಟಲ ಹೂಡಿ
ಭೋಂಕರಿಸುತ ಕತ್ತುರಿಗಳಿಂಸೆಂಸೆದು ಮುಸುಕಂತ ೩

ಏಕೋದೇವನೆಂಬ ಬಿರಿದ
ಜೋಕೆಯಿಂದ ಕಾಲೊಳಿಟ್ಟು
ಕಾಕಂದ್ವಿಜರ ಕಯ್ಯ ಕಿತ್ತು ಕಿತ್ತು ಬಿಸುಟುತ
ಲೋಕದೊಡೆಯ ಚೆನ್ನಬಸವ
ರಾಜ ಧರೆಗೆ ಇಳಿದು ಬಂದ
ಏಕೋದೇವನೆಂಬ ವೀರವಸವಂತಕೆ ೪

ಮುನ್ನ ಕಣೆಯ ಪೇಳ್ವ ಆತ
ಸಣ್ಣವನ[ನು] ಕಳುಹಿ ತಾನು
ಜನ್ನಪಿಳ್ಳೆಯೆಂಬ ಡೊಂಬಗಣೆಯ ನಟ್ಟನು
ಕಣ್ಣು ಮೂರನುಳ್ಳ ಶಿವನ
ಕಣ್ಣಿನಲ್ಲಿ ನೋಡದಿಹರ
ಕಣ್ಣು ಕೀಳ್ವ ಹದ್ದು ಕಾಗೆವಿಂಡುವದಗಿತು ೫

ಹದ್ದು ಕಾಗೆವಿಂಡು ಮನದೊ
ಳುಬ್ಬಿ ಉಬ್ಬಿ ಲಾಗಿಸುತ್ತ
ಮುದ್ದುಮುಖನ ಬರವ ಕಂಡು ನಗುತ ಹರುಷದಿ
ಬಿದ್ದು ಏಳಲಾರದಿಹವು
ಸಿದ್ಧಬಸವ ಈತನೆಂದು
ಎದ್ದು ಕುಣಿವ ರಣಭೂತ ಏಳುಕೋಟಿಯು ೬

ಕಾಡು ಕಾಣದಿಹರ ಕರುಳ
ಮುಂಡದಲ್ಲಿ ತೆಗೆದು ಇವರ
ಮಂಡೆಗಳನು ರುಂಡಮಾಲೆ ಹಾಕಿಕೊಂಬುತ
ಬಂಡು ಮಾಡಿ ಭ್ರಷ್ಟರುಗಳ
ಕೆಂಡದಲ್ಲಿ ನೂಕಿಸುತ್ತ
ಗಂಡುಗಲಿಯು ಚೆನ್ನವೀರ ಬಂದ ಕಾಣಿರೊ ೭

ಧರೆಯು ಭಾರವೇರಿತೆಂದು
ಉರಗ ಫಣೆಯು ಕೊಡಹಲಾಗಿ
ಗುಡುಗಿತೆಂದು ನುಡಿದವದರ ಹದನ ತಿಳಿದರೆ
ಒದೆದು ಸದದು ಬುಧರ ತಲೆಯು
ಮಿದುಳ ಬ[ಗೆದು] ಕುಣಿಸಲಿತ್ತ
ಕದನಕಂಟಿ ವೀರವಡಿವಳಯ್ಯ ಬಂದನು ೮

ಶರಣು ಶಂಕರೇಶ ಶರಣು
ಶರಣು ಸರ್ವಶೀತ ಶರಣು
ಶರಣು ಚನ್ನಬಸವ ಶರಣು ಶರಣು ಶರಣನು
ಶರಣು ವೀರಭದ್ರ ಶರಣು
ಶರಣು ವಿಶ್ವನಾಥ ಶರಣು
ಶರಣು ಹಂಪೆಯಾಳ್ದ ವಿರುಪಲಿಂಗ ನಾಟವು ೯

೬

ರಾಗ ॥ ಆಹರಿ

ಬಸವನೆಂಬ ಬಳ್ಳಿ ಹುಯ್ಯಲನಿಕ್ಕಿತು
ಆಸವಸಾಕ್ಷನೆ ಬಲ್ಲ ಕು ಕೂ ಕೂ
ಕು ಕು ಕುಲಿಸಿದ ಪ್ರಳಯ ಬಂದು ವೀರಶೈವ ನಿಂದು
ಹುಸಿಯು ಹುರಿದ ಕಳ್ಳ ಕೂ ಕು ಕೂ ಕು ಕು ಕು ॥ ಪಲ್ಲ ॥

ಬೇಂಟೆಕಾರ ಬೇಡ ಬಸವದಂಡೇಶನು
ಬೇಂಟೆಗೆ ಹೊರವಂಟ
ತುಂಟಕ ತೃಣ ನರಮೃಗಗಳನೆಚ್ಚೆಚ್ಚು
ಬೇಂಟೆಯನಾಡಿದ ೧

ಕರಿಯ ಬಸವರಾಜ ಕರ್ಮಕೋಳಾಹಳ
ಮರುಳಾಟದಲೀಲೆ
ಮರುಳುತಂಡವ ಕೂಡಿ ಗುರುಸಿದ್ಧಬಸವೇಶ
ಉರಿಲಿಂಗದೊ ಭಾವ ೨

ಇಪ್ಪತ್ತೈದಾರನೆಯು ಲೀಲೆಯೆಂದು
ಎತ್ತಿದನಜೀವ
ಸಪ್ತಮಾತೃಕೆಯರ ಕೂಡಿ ಸಂವಾದಕ್ಕೆ
ಕರ್ತ ಬಿರಿದನಾಂತ ೩

ಬೇವಸಂದು ವೀರ ಬೆಸನಾಂತು ಬಂದನು
ಗ್ಗಾವುರಿವಂನುಜರ
ಈವರಾಯಂಪ್ಯಸರಿಯೆಂದು ಭೂತಗಣಕೆ
ವೀಳ್ಯ ತಾನೆದ್ದು ಕೊಟ್ಟನು ೪

ವೀಳ್ಯವಿಡಿದು ಭೂತಗಣಸಮ್ಮೇಳವು
ದೇವನ ಕೊಂಡಾಡಿ
ದಾಳಿಮಾಡಿದ ಧನುರ್ಮಾಸದ ಒಸಗೆಯು
ಹೇಳುಂವರಳವಲ್ಲ ೫

ಬಂಡಿ ಬಂಡಿಯು ಹೆಣ ತುಂಬ ತುಂಬ ಹೂಡಿ
ಮಂಡಲದೊಳಗೆಲ್ಲ
ಅಂಡಲೆವ ರೋಗಬರ್ಬುತವಾಯಿತು
ಮಂಡಲಪತಿ ಕೇಳ ೬

ಬಂಡಿಯೊಳಗೆ ಹೆಣ ತುಂಬಿದ್ದಾಗೆ ನಿಂದ
ಅಂದವನೇನೆಂಬೆ
ಅಂಡಲವರೋಗ ಆ ಹಿಂಡುನಾಯಿ ನರಿ ಹದ್ದು ಕಾಗೆಗಳು
ತಿಂದು ತೇಗಿದವು ೭

ಬಿದ್ದಲ್ಲಿ ಬಿದ್ದಾಗೆ ಇದ್ದ ನರಕಿಗಳು
ಹೊದ್ದಲಮ್ಮರು ಕೇಳಿ
ಅದ್ಭುತವಾಯಿತು ಬ್ರಹ್ಮಾಂಡದೊಳಗೆಲ್ಲ
ದುರ್ಗೆಯು ಕೋಲಾಹಳ ೮

ಕಳ್ಳಬಂಟ ಹೊಕ್ಕ ಕರಿಯು ಬಸವನೆಂಬ
ಅಲ್ಲಲ್ಲಿ ಬೊಬ್ಬೆಯು
ನಿಲ್ಲದೆ ತಮ್ಮೊಳು ತಾವಿರಿದಾಡಿತು
ಚೆಲ್ಲಪಿಲ್ಲಿಯಾಗಿ ೯

ಹಟ್ಟಿಕೊಟ್ಟವೆದ್ದು ಹಗರಣವಾಯಿತು
ಪಟ್ಟದ ವಸವಂತ
ಅಷ್ಟದಿಕ್ಕಿನ ಮಾನ್ಯ ಅಧಿಕಾರಿಗಳೆಲ್ಲ
ಬೆಟ್ಟವ ಹತ್ತಿತು ೧೦

ಉಟ್ಟಸೀರೆ ತೊಟ್ಟಾಭರಣವನೆಲ್ಲ
ಬಿಟ್ಟು ಹೋಗಿ ತಾವೆ ಅಲ್ಲಿ

ಬೆಟ್ಟವನೇರಲು ಅಟ್ಟಟ್ಟಿ ಕಡಿದರು
ಪಟ್ಟದರಸಿನಾಳು ೧೧

ಹೊನ್ನುಸೂರೆ ಹೆಣ್ಣುಮಣ್ಣು ಸೂರೆ ದೊಡ್ಡ
ಕನ್ನಗಳನು ಹೊಕ್ಕ
ಇನ್ನೇನ ಮಾಡುವೆ ಚೆನ್ನಬಸವಯೆಂದು
ತಮ್ಮೊಳಗೊರಲಿತ್ತು ೧೨

ಅಬ್ಬರ ಘನವೆಂದು ಅಡವಿಯು ಹೊಕ್ಕರೆ
ಸಿದ್ಧಬಸವನಾಣೆ ಅಲ್ಲಿ
ಒಬ್ಬರನೊಬ್ಬರ ಕೂಡಿರಲೀಸಳು
ಅರ್ಬುತಮಾರಿಯು ೧೩

ಕುಂಕುಕುಯೆನ್ನುತ ಕೂಡಿ ತನ್ನವರನು
ನೂಕಿದ ಪಾಪವು ಏಕೊ
ದೇವ ಕೂಡಲಚೆನ್ನಸಂಗಯ್ಯ ಈ ಪರಿಯಲಿ
ತಂದ ಕುಕೂಕು ಕುಕುಕೂ ೧೪

೭

ಹಬ್ಬ ಬಂದಿತಲ್ಲ ಹರಕೆಯು ಕುರಿಗಳ ತರಿದರಲ್ಲ
ದುರ್ಗಿ ಚೌಡಿ ಚಾಮುಂಡಿಯುವರುಗಳು
ಸುಗ್ಗಿಯು ಕುಣದರಲ್ಲ ॥ ಪಲ್ಲ ॥

ತಬ್ಬಿಬ್ಬಿಗೊಂಡಿತಲ್ಲ ತಮ್ಮೊಳು
ತಾವೆಯಿರಿದರಲ್ಲ
ನಮ್ಮ ಸುಗ್ಗಿಯ ವೀರವಸಂತರಾಯನದೊಂದು
ಅಬ್ಬರ ಬಂದಿತಲ್ಲ ೧

ಭೂತಳದೊಳಗಿಹ ಪ್ರೇತ ಪಿಶಾಚಿಗೆ
ಐತಳವನು ಹೇಳಿದೆ
ಭೂತಳದೊಳಗೆ ಡಂಗುರವೆತ್ತಿ ಸಾರಿದೆ
ಭೂತಗಣಂಗಳಿಗೆ ೨

ಆತನ ನುಡಿ ಸತ್ಯ ನಿತ್ಯವಿದೆ ನಂಬಿ
ಭೂತಗಣಂಗಳಿರ
ಎಂದು ಈ ಪರಿಯಲಿ ಸಾರಿ ಪೇಳಿದ
ನಮ್ಮ ಭೂತಗಣಂಗಳಿಗೆ ೩

ತಂಡತಂಡದ ರಣಭೂತ ಮರುಳುಗಳ
ಹಿಂಡಿನೊಳಾಡುವದ
ಕಂಡಿರೆ ಕರಿಯ ಬಸವ ಮರುಳಾಟದಿ
ನಿಂದತಿ ಚೋದ್ಯವನು ೪

ಹಿಂಡುದೈವದ ಗಂಡ ಹಿರಿಯ ಭೂತವಾದ
ಅಂದವನೇನೆಂಬೆನು
ಮುಂಡೆಯರುಗಳು ಮುತ್ತೈದೆಯಾದರೆಂದು
ಡಂಗುರ ಸಾರಿದೆನು ೫

ಮಾರಿ ಮಸಣಹಿಂಡು ಮರವೆಯ ಕೊಲುತಿದೆ
ವೀರಭದ್ರೇಶನಾಣೆ
ಕೊರಲಗ ಪಿಡಿಕೊಂಡು ಮುಂದಾಗಿ ನಡೆವಂಥ
ವೀರರೊಬ್ಬರನು ಕಾಣೆ ೬

ದಾರಿಸಂಗಡವಿಲ್ಲ ಧನದಾಸೆ ನಿಮಗಿಲ್ಲ
ಭೂರಿ ಮಾನವಗಳಿರ
ಮಾರಾರಿಯ ಕರುಣ ತಪ್ಪಿತು ನಿಮಗಿದು
ಸಾರಿ ನಾ ಹೇಳಿದೆನು ೭

ಪಣೆಯ ಬರಹವ ತೊಡದಳು ಪರಮೇಶ್ವರಿ
ಶಿವನಾಣೆ ಹುಸಿಯಲ್ಲವೊ
ಬಣಗು ಮಾನವರುಗಳಿರ ಉರಿಲಿಂಗದುದ್ಭವ
ಪರಮೇಶ್ವರದುರ್ಗಿಯು ೮

ಹವಣೆಲ್ಲ ಧರೆಯೊಳು ಹಾದಿಯೊಳಗೆ ಭಯ
ರಣಭೂತದಟ್ಟುಳಿಯು
ಎಣೆಕಾಣೆನು ಎಮ್ಮ ಚಂಡಿಕದೇವಿಗೆ
ತ್ರಿಣೆಯು ಸಿದ್ಧೇಶನಾಣೆ ೯

ಬ್ರಹ್ಮಾಂಡವನಾವರಿಸಿ ಭಕ್ಷಿಸುವಂತ
ಪೆರ್ಮೆಯ ಮರುಳುವೊಂದು
ನಮ್ಮಯ್ಯ ಚೆನ್ನಬಸವರಾಜನ ಹಾರಿ
ಧರ್ಮವ ಜಪಿಸಿ ತಾನು ೧೦

ನಿರ್ಮಲವಾಯಿತು ಪೆರ್ಮೆಯ ಮರುಳಿಗೆ
ಧರ್ಮಸ್ವರೂಪ ಬಂದು

ಧರ್ಮಸ್ವರೂಪ ದಂಡೇಶ ಅಪ್ಪಣೆಯಿತ್ತ
ಕರ್ಮವ ಭಕ್ಷಿಸೆಂದು ೧೧

ನಲಿನಲಿದಾಡಿತು ನಾಕಂದಿಕ್ಕಿಲಿ ತನ್ನ
ನಾಲಗೆಯನು ನೀಡಿತು
ಹಿರಿಯುಮರುಳುಂಗಳ ಬಳಗವ ಕೂಡಿ ತಾ
ಹರುಷದಿ ನಲಿದಾಡಿತು ೧೨

ಅಪ್ಪಣೆ ವೀಳ್ಯವಿತ್ತನು ಆದಿ ಬಸವೇಶ
ಕಪ್ಪಡಿಸಂಗಮೇಶ್ವರನ
ಒಪ್ಪವನಿತ್ತು ಭಕ್ಷಿಸುಯೆಂದು ಕಳುಹಿದನು
ಚಿಕ್ಕಚೆನ್ನಬಸವಯ್ಯನು ೧೩

ಕುರುಹ ನೋಡದೆ ತಮ್ಮ ಅರುಹಿನೊಳಾಡುವ
ಹರಶರಣರಿಗೆನ್ನನು
ಚರಣದ ಚಮ್ಮಾವುಗೆಯೆಂದು ನಮ್ಮಯ್ಯ
ಧರೆಗಿಳಿತಂದ ನೋಡಿ ೧೪

ಧರೆಯೊಳು ಭಕ್ತಿಯ ವಿವರವ ತೋರುತ್ತ
ಕರಿಯ ಬಸವನೊಳಗೆ
ಗುರು ಕೂಡಲಚೆನ್ನಸಂಗಯ್ಯ ನಿರ್ವಾಣ
ದಿರವ ತಾ ಪೇಳಿದನು ೧೫

## ೮

ರಾಗ ॥ ಆಹರಿ

ಹೊಸದುರ್ಗಿ ಬಂದಳು ವಸುಧೆಗಿಳಿದು ತಾನು
ಪುಸಿಯಲ್ಲ ಡಂಗುರ ಕುಲಿಲಿಲಿ ಕುಲಿಲಿಲಿ
ಕುಸುಮಶರನ ಸುಟ್ಟ ಶಶಿಶೇಖರನ ಪಟ್ಟದಸವು
ಬಸವ ಬಂದ ಕುಲಿಲಿಲಿ ಕುಲಿಲಿಲಿ ॥ ಪಲ್ಲ ॥

ಭದ್ರವಾಯಿತೆಂದು ಸಿದ್ಧನು ಕಳಾವ
ಮುದ್ದುಮುಖನಿಗಿತ್ತ
ಗರ್ದಿಸಿದನು ನರಕಿಗಳೆದೆ ದಿಗ್ಗಲೆನೆ
ಸಿದ್ಧವೀರ ತಾನೆ ೧

ಹರನಡಿಗೆರಗಿದವರಿಗೆ ತನ್ನ ಶಿರವನು
ಚರಣಕೆ ನಮಿಸುತ್ತ

ಹರಸರಿಯುದ ನರಗುರಿಯು ಶಿರವ ತಾನೆ
ಧರದಿ ಚೆಂಡಾಡಿದ ೨

ಸತ್ಯವುಳ್ಳವರಿಗೆ ಭೃತ್ಯನಾಗಿ ಅಯ್ಯ
ಕರ್ತು ಬಸವರಾಜ
ಸತ್ಯಹೀನರುಗಳ ಕತ್ತರಿಸುತ ಮೂಗ
ಕೆತ್ತು ವೀರ ತಾನೆ ೩

ದುರ್ಗಿ ಒಂದುದ ತಾವರಿದೆ ತಮ್ಮೊಳು
ತಬ್ಬಿಬ್ಬುಗೊಳುತಿದೆ
ಮದ್ದು ಮಂತ್ರವ ಬಲ್ಲ ಸಿದ್ಧರುಗಳ
ತನ್ನ ಮಂದ್ದು ಭೂತಕಿತ್ತ ೪

ಬುಧವಾರ ಭೂತ ಗಣಕೆ ವೀಳೆಯವಿತ್ತು
ಒದಗಿ ಬಂದಿತುಯೆಂದು
ಸದಮಲಾತ್ಮಕ ವೀರಬಸವೇಶ ತಾನಾದ
ಹದನ ಹೇಳಿದೆನೆಂದು ೫

ಭಾಳಲೋಚನ ಭಕ್ತರ ಆಳುವಾಳಿನ
ಆಳಿನ ಆಳೆಂದು
ಭಾಳಲೋಚನನರಿಯದ ಭ್ರಷ್ಟರುಗಳನು
ಗೋಳಿಡಿಸುತ ಬಂದ ೬

ಎಣೆಕಾವೇರಿಯ ಮಧ್ಯದೊಳಗೆ ಅಯ್ಯ
[ಚೆನ್ನವಸ]ವಂತ ತಾನಾದ
ಚೆನ್ನಿಗ ವೀರಬಸವ ತಾನೆ ತಾನಾದ
ಮುನ್ನಿನ ಕಥೆ ಬಂತು ಕುಲಿಲಿಲಿ ಕುಲಿಲಿಲಿ ೭

೯

ರಾಗ ॥ ತೆಲುಗ ಕಾಂಬೋದಿ

ಕಟ್ಟಿಕಡೆಯಾಟ ಕಾಳ ಬಸವನೆಂದು ಹೊಯ್ಯಿರೊ ಡಂಗುರವ
ನಮ್ಮ ಚಿಕ್ಕವೀರ ಚೆನ್ನಬಸವನೆಂದು ಹೊಯ್ಯಿರೊ ಡಂಗುರವ ॥ ಪಲ್ಲ ॥

ದುಷ್ಟಗಳೆಲ್ಲವು ರಾಶ್ಯವಾಯಿತೆಂದು
ಪುಸಿಯಾಟ ಮುಗಿತೆಂದು ಕೊಂಗವ ಪಿಡಿದನು ೧

ಜಗದೇವ ಮೊಲ್ಲೆಯಾಬೊಮ್ಮಣ್ಣ ತಾನೆಂದು
ಜಗಕೆ ಕಿಚ್ಚನಿಕ್ಕಿ ಉರುಹೂದ ಕಂಡೆನು ೨

ಜಯಗಂಟೆವಿಡಿದು ನಾ ಸಾರಿದೆ ಧರೆಯೊಳು
ಜಗದೊಡೆಯನು ವೀರ ಮಡಿವಾಳ ಮಾಚಯ್ಯ ೩

ಜಂಗುಳಿದೈವದ ಗಂಡ ವೀರನೆಂದು
ಇದು ಲಿಂಗದಾಣೆ ಇದು ಲಿಂಗದ ನುಡಿಯೆಂದು ೪

ಏಕಮುಖದ ಶಕ್ತಿ ಏಕೋದೇವನೆಂದು
ಹೇಸಿಗಳೆಲ್ಲರ ಪೇತು ಭೂತಕಿತ್ತ ೫

ಕದನಕ್ಕೆ ನಿಂದಳು ಕರಿಯುಚವುಡಿಯೆಂದು
ಒಲಿಹಟ್ಟಿ ನಿಂದಳು ಚಾಮುಂಡಿ ತಾನೆಂದು ೬

ಭಕ್ತಿಗರಸಿಯೆಂದು ಬಂಡಿಯ ಕಟ್ಟಿದೆ
ನಮ್ಮ ಪಟ್ಟದರಸಿಯೆಂದು ಕಂಟ್ಟಿದೆ ಕುರಿಗಳ ೭

ನಾಲ್ಕುಯೋಜನಕೊಂದು ಪಟ್ಟಣವಾಯಿತು
ನಮ್ಮ ಭೂತಗಣಕೆಲ್ಲ ತೀನಿಯಾಯಿತು ೮

ವಿರಹ ಇಪ್ಪತ್ತೈದಾಟಕ್ಕೆ ತಂದೆನು ಇದು
ಉರಿಲಿಂಗದೋದ್ಭವ ಲಿಂಗ ಬಸವನೆಂದು ೯

## ೧೦

ರಾಗ ॥ ನಾದನಾಮಕ್ರಿಯ

ಬೇಡ ಬಿಲ್ಲನು ಪಿಡಿದು ಬೇಂಟೆಯಾಡುತ ಬಂದ
ನಡವಿಮೃಗಗಳ ಮೇಲೆ ಧಾಳಿ
ಗಾಡಿಗಾರನು ಕರಿಯ ಬೇಡರೊಡಿಗೆಯಾಗಿ
ನಾಡಮೃಗ ಹತವಾದವಮ್ಮ ॥ ಪಲ್ಲ ॥

ಪಿಂಡಬ್ರಹ್ಮಾಂಡವೆಂಬಾರಣ್ಯದೊಳಪೊಕ್ಕು
ಚಂಡವಿಕ್ರಮರಾಜನೆಂಬ ಬೇಡ
ಖಂಡಿಸುತ ಕಡಿಕಡಿದು ತುಂಡು ತುಂಡನು ಮಾಡಿ
ಸಂಧಿಸಿ ಸನ್ಯಾಸಿಯೆಂದೆಂಬ ಬೇಡ
ಪಿಂಡದೊಳಗಿಹ ಅಷ್ಟಮದ ಕಾಮ ಕಪಿಗಳನು
ಖಂಡಿಸುತ ತಾನೆ ತಾನುಂಡ ಬೇಡ
ಮಂಡಲದೊಳಿಹ ದೇವ ದಾನವ ಮೃಗಗಳ ಮರುಳು
ತಂಡಗಳಿಗುಣಿಸುತ್ತ ಬಂದ ಬೇಡ ೧

ಜಗದ ಪಿಂಡಸ್ಥಲದ ಅರಣ್ಯಮಧ್ಯದೊಳು
ಜಗದೇವರಾಯನೆಂದೆಂಬ ಬೇಡ
ಜರೆದು ಝಂಕಿಸಿ ತನುಮನದ ಪ್ರಕೃತಿಯನೆಲ್ಲ
ಅರುಹಿ ತೋರಿದನು ಅಖಂಡ ಬೇಡ
ಜಗಬೇಂಟೆಕಾರ ಜಗದಾರಾಧ್ಯ ಜಂಗಮನು
ಜಗದಸೂತ್ರಿಕನೆಂದೆಂಬ ಬೇಡ
ಜಗಕೆ ಒಮ್ಮನವಿತ್ತು ಜಗವ ಪಾವನ ಮಾಡಿ
ಗುರುಬಸವಲಿಂಗನೆಂದೆಂಬ ಬೇಡ ೨

ಕರದಿ ಖಡ್ಗವ ಪಿಡಿದು ಶರಭಾವತಾರದಿಂ
ಕರಿವೀರವಸವಂತನೆಂಬ ಬೇಡ
ಧರೆಯನಾಹುವೆಂಬ ನಾರಸಿಂಹಾವತಾರ
ಶಿರವ ಛೇದಿಸಿ ರಕ್ತಸುರಿದ ಬೇಡ
ಪರಮ ಪರತತ್ವಕ್ಕೆ ನಿಲುಕದಿಹ ಅಪ್ರತಿಮ
ಗುರುಗೊಹೇಶ್ವರಲಿಂಗನೆಂಬ ಬೇಡ
ಹರುಷದಿಂ ಬೇಂಟೆಯಲಿ ಬೇಡತಿಯ ಕೂಡಿ
ಧರಣಿಪತಿ ದಂಡೇಶನೆಂಬ ಬೇಡ ೩

ತನ್ನನರಿಯಲು ಬೇರೆ ಇದಿರ ತೋರಿದ ಕರುಣಿ
ಚಿನ್ಮಯನು ಚಿದ್ರೂಪನೆಂಬ ಬೇಡ
ತನ್ನನರಿದು ಇದಿರ ಮರೆದು ತಾ ತಾನಾದ
ಭಿನ್ನಭಾವ ಭ್ರಮೆಯನಳಿದ ಬೇಡ
ಬನ್ನಣೆಯ ಭಜನೆಗಳ ಬಾಹ್ಯಭಕ್ತಿಯನೆಲ್ಲ
ತನ್ನೊಳಗೆ ತಾ ತಿಳಿದು ತುಳಿದ ಬೇಡ
ನಿರ್ಮಲದ ನಿಶ್ಚಿಂತ ನಿರ್ವಯಲ ನಿರ್ವಾಣ
ಒಮ್ಮನವನುಂಡು ಸುಖಿಯಾದ ಬೇಡ ೪

ಬಿಲ್ಲ ಬೇಡನು ಬಿರಿದುಳ್ಳ ಭಕ್ತಾದಿಗಳ
ಅಲ್ಲಲ್ಲಿ ಅರಸುತ್ತ ಬಂದೆ ನಾನು
ಕಲ್ಯಾಣವಾಯಿತು ಕಾವೇರಿ ಮಧ್ಯದಲಿ
ಎಲ್ಲೆಲ್ಲಿ ವೀರವಸವಂತ ನಾನು
ಸಲ್ಲೀಲೆಯಿಂ ಸಕಲ ಸಂಪದದೊಳಿಹ ರಾಜ
ಬಿಲ್ಲಾಳು ನಾನಲ್ಲದಿಲ್ಲವೆಂದು
ಹುಲ್ಲುಮಾನವರುಗಳ ಹಲ್ಲ ಉದಿರಿಸಬಂದ
ಚೆಲ್ವ ಕರಿವೀರ ಬಸವಾರ್ಯನೆಂದು ೫

೧೧

ರಾಗ ॥ ತೆಲುಗ ಕಾಂಬೋದಿ

ಆನಂದವಿದಪ್ರತಿಮ ಲೀಲಾ
ನಂದವಿದಪ್ರತಿಮ
ಧ್ಯಾನಲಿಂಗಸಂಧಾನ ಗುರು ಪರ
ಮಾನಂದವಿದಪ್ರತಿಮ ॥ ಪಲ್ಲ ॥

ಪ್ರತಿಯಿಲ್ಲದಪ್ರತಿಮನ ಪರಿಣಾಮದಿ
ಪತಿವ್ರತೆಯರು ಪರಮಾನಂದದಿ
ಸತಿಪತಿಯೊಳಗೇಕವಾದ ಅತೀತನ
ಸ್ತುತಿಸಿ ಕೊಂಡಾಡಿ ನಿಷ್ಕಾಮಿಯರು ೧

ಖಂಡಿತನಲ್ಲ ಅಖಂಡಿತಮಹಿಮನ
ಚಂಡಿ ಚಾಮುಂಡಿ ಪ್ರಚಂಡಿಯರು
ನಂಡುಮಾಡಿ ಶರಣರ ನಿಲವರಿಯದರ
ಮಂಡೆಗಳನು ಚೆಂಡನಾಡಿದರು ೨

ನಿತ್ಯ ನಿರಂಜನ ನಿಷ್ಪತಿ ಮಹಿಮನ
ಸತ್ತು ಹುಟ್ಟುವ ಸಟೆಮಾನವರ
ಎತ್ತಲೆಂದರಿಯದ ಕತ್ತೆಮಾನುವರಿ
ಗೆತ್ತಿದೆ ಮಾಸಾಳುಗತ್ತಿಯನು ೩

ಹರಶರಣರ ಊಳಿಗದ ಆಳಿನಾಳೆಂದು
ಕರಿಯ ಬಸವನೆಂಬ ತೊಡರ ಕಟ್ಟಿ
ಎರವೆಂದು ಕಾಣುವ ಪರವಾದಿಗಳ ಮೂಗ
ಅರಿವ ಬಸವನೆಂಬ ಮಾಸಾಳು ೪

೧೨

ರಾಗ ॥ ಬೌಳಿ

ಡವುಡೆವಿಡಿದಾನಂದ ಡಮರುಗ ತ್ರಿಶೂಲಿಯ
ಡಂಡಣಿರು ಡಣರೆಂಬ ರಭಸದಿಂದ
ಮಲಹರಿಯರಿಬ್ಬರು ಸಂತ ಮಾಯಕೋಳಾಹಳನೆಂಬ
ಬಿರಿದ ಕಾಲೊಳು ಕಟ್ಟಿ ಕರಿಯ ಬಸವ
ಡವುಡೆವಿಡಿದಾನಂದ ಡಮರುಗ ತ್ರಿಶೂಲಿಯ ೧

ಬಿರಿದು ಶರಣರಲೆಂಕ ಬಿರಿದು ಶರಣಾಗತನು
ಬಿರಿದು ಗುರುಬಸವನೆಂದೆಂಬ ಬಿರಿದು
ಬಿರಿದು ಪ್ರಭು ಅಪ್ರತಿಮಲಿಂಗ ಅನಿಮಿಷನೆಂಬ
ಬಿರಿದ ಕರದೊಳು ಪಿಡಿದ ಕರಿಯಬಸವ
ಬಿರಿದು ದೇವರದೇವ ಬಿರಿದು ಕರುಣಾಕರನು
ಬಿರಿದು ಪರತತ್ವಕ್ಕೆ ನಿಲುಕನೆಂಬ
ಬಿರಿದ ಕಾಲೊಳು ಕಟ್ಟಿ ಧರೆಯೊಳಗೆ ಸಾರಿದೆನು
ಬಿರಿದು ವೀರವಸವಂತರಾಯ ಧರೆಗಿಳಿದ ೧

ಈಶನ ಕುಮಾರ ವೀರೇಶವೀಶ್ವರನು
ಆ ಶರಭ ಅವತಾರವಾಗಿ ಬಂದು
ಅಸುರ ಹಿರಣ್ಯ ರಾಕ್ಷಸನು ತಾ ತಿಂದು
ಘಾಸಿಯಾಗಿಪ ನಾರಸಿಂಹ ಘನವೆಂದು
ಕಾಶಿಯೊಳು ವೇದವ್ಯಾಸನು ಕರವೆತ್ತ
ಲಾ ಸಮಯದೊಳು ನಂದಿಕೇಶ ಬಂದು
ಆರವಕಿತ್ತೆನ್ನ ಕೈಲಿತ್ತು ತೋರೆಂದು
ವ್ಯಾಸನನು ಕೈಸಾರುತಿದೆಕೊ ಧರೆಯೊಳಗೆ ೨

ನಿತ್ಯಉಳ್ಳವನೊಬ್ಬನೆಂಬುದರಿಯದೆ ವ್ಯಾಸ
ಸತ್ತುಹುಟ್ಟುವ ಅಜನು ಹರಿ ರುದ್ರರು
ಮೃತ್ಯುವಿಗೆ ಆಳಾಗಿ ಮೂವತ್ತು ಭವವೆತ್ತಿ
ಕತ್ತೆ ಸೂಕರನಾಗಿ ತೊಳಲಿ ಬಳಲಿ
ಇತ್ತೆರದ ಪ್ರಮಥಗಣ ತಿಂತಿಣಿಗಳು ಕೂಡಿ
ಮೃತ್ಯುಂಜಯನೊಬ್ಬನೆಂದೆತ್ತಿ ಕರವ
ತಥ್ಯಮಿಥ್ಯವ ನುಡಿವ ಪರವಾದಿಗಳ ಮೂಗ
ಕೆತ್ತುವಂ ಮಾಸಾಳುಗತ್ತಿ ಬಸವ ೩

ಅಜ ಹರಿಯು ರುದ್ರ ಮೂವರ ಗಂಡನೆಂದೆಂಬ
ಬಿರಿದ ಕಾಲೊಳು ಕಟ್ಟಿ ಕರಿಯ ಬಸವ
ವಿಜಯಲಕ್ಷ್ಮಿಯರಸ ವೀರವಸವಂತನು
ಅಜಕಪಾಲವ ಪಿಡಿದು ಬಂದು ನಿಂದ
ಮರ್ಘುಭಾಪುರೆ ಮಹದೇವನೊಬ್ಬನೆಯೆಂದು
ಧ್ವಜವೆತ್ತಿ ಸಾರಿದೆನು ತ್ರಿಜಗದೊಳಗೆ
ಭಜನೆಗಳ ಭಂಗಿಸುತ ಕುಜಕುಠಾರನು
ಬಸವ ವಿಗಡವೇಷದ ವೀರಶರಭಾವತಾರ ೪

ಸುರೆಯುವನು ಸೇವಿಸುವ ಮರವೆ ಮದದಾನೆಗಿದು
ಅರುಹೆಂಬ ಅಂಕುಶವು ಕರಿಯು ಬಸವ
ತರಿದು ಕೆಲಕೊತ್ತಿ ತಾಮಸದ ಬಳ್ಳಿಯು ಹರಿದು
ನರಸಿಂಹವತಾರವಳಿದು ಧರೆಯೊಳಗೆ
ಪರಮ ನಿರ್ವಾಣ ಪಾವನಚರಿತ ಭಕ್ತರನು
ಪೊರೆವ ಪೂರ್ವಾಚಾರ್ಯ ಶರಣ ತಿಲಕ
ಹರಸಿ ಹಾರೈಸಿ ತನ್ನವರನೋದಿಸ ಬಂದ
ಗುರು ಚೆನ್ನಸಂಗಯ್ಯ ಪರದೇಶಿಯಾಗಿ ೫

ಡವುಡೆ ಡಮರುಗ ಶಂಖ ತಾಳ ಮದ್ದಳೆ ಭೇರಿ
ಹೊಡೆವ ತಂಬಟೆ ಕಹಳೆ ದುಂದುಭಿಗಳು
ಕೊಡು ಬೆಸನನೆಂದೆಂಬ ಭೂತಗಣ ಸಹವಾಗಿ
ಮೃಡ ಗೊಹೇಶ್ವರೆ ಧನುವ ಪಿಡಿದು ಹೆದೆಹೊಡಿ
ನಡೆದು ಧನುರ್ಮಾಸವಿದು ನಾಲ್ಕು ದಿಕ್ಕಿನೊಳೆಲ್ಲ
ಕಡೆಯ ಕುಂಭದ ಕುಂಭಿನಿಯ ಕುಂಭದಿ
ಕಡಿದಾಡಿ ಜೋಗಿ ಜಂಗಮ ಮಡಿದು
ಸ್ವಯವೆಂಬ ನಿಜವುಳಿದು ಜಗದೊಳಗೆ
ಜಯತು ಜಯುವೆಂದು ೬

ಸತ್ಯುಹೋಹರ ಗಂಡನೆಂದೆಂಬ ಪೊಡೆಯುವ
ಕಟ್ಟಿ ಕಲಿಯು ತುಳಿದು ಮೆಟ್ಟಿ ನಿಂದು
ಅಷ್ಟದಿಕ್ಕಿನ ಭೂತಕವುತಣವ ಮಾಡಿಸುವ
ವಿಸ್ತರಿಪರಳವಲ್ಲ ವೀರಾವತಾರ
ಕತ್ತಲೆಯು ಕವಿದು ಕ್ರೋಧನದೊಳಗೆ ಕ್ರೋಧಿಸಿತು
ತೊಪ್ಪೆಯೊಳಗಣ ಹುಳುವಿನಂತೆ ನರರು
ಅರ್ತಿಯಿಂ ಮಾದಾರ ಚೆನ್ನನಾಳ್ ನಾನೆಂದು
ವಿಸ್ಮಯದ ಡವುಡೆಯು ಪಿಡಿದು ಹೊಯ್ದು ೭

ಭೂತಳದೊಳಗೆ ಭೂತಗಣಕೆ ಐತಳವಿತ್ತು
ದೀಪಾಳಿಗೆಯ ಶುದ್ಧ ಕಾರ್ತಿಕದಲಿ
ಆ ಶುದ್ಧ ಪೌರ್ಣಮಿಯು ಮಂಗಳವಾರದಲಿ
ಆ ಪರಮಾತೀತ ಐತಳವ ಮಾಡಿ
ಆ ಜಾತಿ ಈ ಜಾತಿ ಹೊಲೆ ಜಾತಿಗಳ ಕೂಡಿ
ಈ ಜಗತೆಲ್ಲ ಒಂದಾಗಲೆಂದು

ಮೂಜಗವು ಸೂರೆಹೋಯಿತೆಂದು ಸಾರಿದೆನು
ಮೂರುಲೋಕದ ಗಂಡ ಬಿರಿದು ಕರಿಬಸವ ೮

ಮಂಡಲದ ನರಗುರಿಯು ಹಿಂಡಿನೊಳು ಹೊಕ್ಕಿತು
ಗಂಡುಗಲಿ ಬಸವದಂಡೇಶನಾಳು
ತೊಂಡರಿಗೆ ತೊಂಡನೆಂದೆಂಬ ತೋಳನು ಪೊಕ್ಕು
ಹಿಂಡು ಬೆದರಿತು ಮರುಳುತಂಡ ನಲಿಯಿತು
ತಂಡ ತಂಡದ ಭೂತಗಣಕೆ ಬಲಿಯಾಯಿತು
ಕೊಂಡಾಡಿ ಮರಿ ಮರುಳುತಂಡ ತಮತಮಗೆ
ಗೊಂಡೆಯುದ ಚಬುಕ ಪಿಡಿದಂದವಿದನೇನೆಂಬೆ
ಹಿಂಡುದೈವದ ಗಂಡ ಬಿರಿದು ಕರಿಬಸವ ೯

ಷಡುದರುಶನಕೆ ಒಂದು ಗುದುಗೆಯನು ಪಿಡಿತಂದೆ
ನುಡಿದ ಗಾದೆಯು ಮಾತು ಅಡಗಿದ್ದಿತು
ಸುಡುತಿದೆಕೊ ಮೂಜಗವು ಸೂರ್ಯಮಂಡಲ ಕತ್ತಿ
ಪೊಡವಿ ನಡುಗಿತು ಪೊಸಲೀಲೆಯಾಯಿತ್ತು
ಘುಡುಘುಡಿಸಿ ಆರ್ಭಟಿಸಿ ಕಿಡಿಕಿಡಿಗಳುದುರುತ್ತ
ಕಡಿಕಡಿದು ಖಂಡಗಳ ಪುಡಿ ಪುಡಿಯನು
ಮೃಡನಾಳುಗಳಿಗೆ ಐತಳವ ಮಾಡಿದ ನಮ್ಮ
ಪೊಡವಿಪತಿ ಪರಮಗುರು ಬಸವಲಿಂಗಾಂಗಿ ೧೦

ಸುಟ್ಟ ಶೂಲದಪೆಣನು ಸುಡುಗಾಡ ಭಸಿತವು
ನ್ನಿಟ್ಟು ಪರಮೇಶರಹು ರುದ್ರವೇಷ
ತೊಟ್ಟು ಹರಿಯೆಂಬ ಕುದುರೆಯನೇರಿ
ಕರದೊಳಗೆ ಕಪ್ಪರವ ಪಿಡಿದಯ್ಯ ಸಂಹರಕೆ ನಡೆದ
ಕಟ್ಟಿ ನರರಕ್ಕಸರ ಕಡಿದು ಖಂಡವ ಚೆಲ್ಲಿ
ಅಕ್ಕರಿಂ ಮರುಳು ತಂಡ ಕುಣಿಸುತಭವ
ಎಕ್ಕಟಿಗ ಪೆರ್ಮರುಳ ಪೆಣನ ಮೇಲಕೆಯಿಟ್ಟು
ಚಪ್ಪರಿವ ಸಂಭ್ರಮವ ನೋಡಿ ನಸುನಗುತ ೧೧

ತಂಡ ತಂಡದ ಭೂತ ತಂಡ ತಂಡದ ಮರುಳು
ತಂಡ ತಂಡದಿ ತಲೆಯ ಚೆಂಡನಾಡಿ
ಕೊಂಡಾಡಿ ಚೆನ್ನಬಸವನ ಹಾಡಿ ಹರಸುತ
ಉಂಡು ಡರ್ರನೆ ತೇಗೆ ಭೂತಗಣ ಸಭೆಯು

ಅಂದವಾಯಿತು ಅಜಕಪಾಲ ದಣಿದುಗಳಿತ್ತು
ಅಂದಿಂದ ಉಣಬೇಕುಯೆಂಬ ಸಂದೇಹ
ಇಂದೆವಗೆ ಹರಿಯಿತ್ತು ತೃಪ್ತಿಬಡಿಸಿದೆ
ಆಯ್ಯ ಚಂದ್ರಶೇಖರಲಿಂಗ ಚಾಂಗು ಭಲರೆಂದು ೧೨

ದಂಡೇಶನೆಂಬ ಧನುವಂ ಪಿಡಿದು ಅಲ್ಲಮು
ಅಖಂಡಿತ ಪರಿಪೂರ್ಣಯೆಂಬ ಅಂಬೂಡಿ
ತಾಂಬ ತೆಗೆದೆಸೆಯೆ ಬ್ರಹ್ಮಾಂಡ ತಲೆಕೆಳಗಾಗಿ
ಕೊಂಡಾಡಿತಮರಗಣ ಚಾಂಗು ಭಲರೆಂದು
ಮಂಡಲದ ಕಲಿಕರ್ಮಕಸ ದಹನವಾಯಿತ್ತು
ಚಂಡೇಶ ತಾಂಡವನ್ನಾಡಿ ಉಘೆಯೆನಲು
ಸಂದಣಿಪ ಭಕ್ತಗಣ ತಿಂತಿಣೆಗಳಂ ಕೂಡಿ
ದಂಡನಾಯಕ ವೀರಬಸವನತಿಶಯುವ ೧೩

ಜಯುಜಯುವೊ ಬಸವಯ್ಯ ಜಯುಜಯುವೊ ಬಾಳಯ್ಯ
ಜಯುಜಯುವೊ ಶೂನ್ಯನಿಶ್ಶೂನ್ಯ ಬಸವ
ಜಯು ಜಗವ ಹೊರೆವಯ್ಯ ಜಯು ಜಂಗಮಪ್ರೀಯು
ಜಯು ಮುನಿಗಣಸ್ತೋಮ ಜಯು ಕಾಮಭೀಮ
ಜಯು ಭಕ್ತವತ್ಸಲನೆ ಜಯು ಮುಕ್ತಿದಾಯಕನೆ
ಜಯು ನಿತ್ಯನಿರ್ಮಲನೆ ಜಯು ಕರುಣಸಿಂಧು
ಜಯು ಜಗದಾರಾಧ್ಯನೆ ಜಯು ಪೂರ್ವ ಆಚಾರ್ಯ
ಜಯು ಗೊಹೇಶ್ವರಲಿಂಗ ಚೆನ್ನಬಸವಾರ್ಯ ೧೪

೧೫

ರಾಗ ॥ ತೆಲುಗ ಕಾಂಬೋದಿ

ತಾಳವನಿತ್ತನು ನಮ್ಮ
ಭಾಳಲೋಚನಸಿದ್ಧ
ತಾಳಿ ತಾಳ ಬೇಡವೆಂದು
ಏಳುನೂರೆಪ್ಪತ್ತು ಅಮರಗಣ ಸಹವಾಗಿ
ಧಾಳಿಮಾಡಿದನೆಮ್ಮ ತಾಳದ ಬಸವ
ತಾಳವನಿತ್ತನು ನಮ್ಮ
ಭಾಳಲೋಚನ ಸಿದ್ಧ ॥ ಪಲ್ಲ ॥

ಒಂದಲ್ಲ ಎರಡಲ್ಲ ಸಂದಿಗೆ ಸಾವಿರವೇಧಿ
ಕಂದುಗೊರಳನೆ ನೀ ಬಲ್ಲೆ

ಅಂಡಲೆದು ಕೊಲುತಿದೆ ಅನಾದಿ ಜಂಗಮವೆ
ಹಂದಿಸೂಕರನೆಂಬ ವೇಧಿ
ಈ ಬಂಧನ ಪರಿಹರಿಸೊ ಭವರೋಗವೈದ್ಯನೆ
ಆ ಲಿಂಗವೆಂಬ ಗುಳಿಗೆನ್ನಂಗದೊಳು ನಿಂದು ೧

ರೌದ್ರಿಯೊಳಗೆಲ್ಲ ರಾಹುಕೇತುಗಳದು
ದುರ್ಮತಿಯೊಳು ದುರಿತದುರ್ಗಿಗಳು
ದುಂದುಭನೊಳು ಶಂಭುವಿನಾನಂದವಿದೆಕೋಯೆಂದು
ಡಂಗುರವ ಸಾರಿ ಹೇಳಿದೆನು
ಲಿಂಗದ ನಡೆ ಲಿಂಗದ ನುಡಿ ಲಿಂಗದ ಚೈತನ್ಯ ತಾನೆಂದು
ತಾಳವನಿತ್ತ ಲಿಂಗಬಸವಂಗೆ ೨

ರುಧಿರೋದ್ಗಾರಿಯೊಳು ರೂಪಳಿದು ರುದ್ರಾದಿಗಳ
ಸದೆಬಡಿದು ಸತ್ಯವಿದೆಂದು
ಹಗರಣವನಾಡೆಂದು ಹರುಷದಿಂ ಕರದೊಳಗೆ
ಗುರು ಕಂಚತಾಳವನಿತ್ತ ತಾನೆ
ಗುರುದೇವಣಾರ್ಯನ ವರರುದ್ರಮುನಿಯೆಂದು
ಶರಣಾಗತವಜ್ರಪಂಜರನೆಂಬ ಬಿರಿದ ೩

ಯುಗಸರಿಯಿಂದಿಹೆ ಕೇಳಿ ಗುರುಗೊಹೇಶ್ವರನಾಣೆ
ಯುಗನಾಲ್ಕುಲಕ್ಷ ಮೂವತ್ತು ಬಗೆಗೊಂಡ
ಎಪ್ಪತ್ತುಯೇಳು ಇಂದಿಗೆ ಸರಿ
ಮಡಿವಾಳಯ್ಯಗಳಾಣೆ ಕೇಳಿ
ಹೊಲೆಯರು ಮಾದಿಗರೆಲ್ಲ ಕುಲದಲಿ ಹೊರಡಿತ್ತು
ಚಲದಂಕ ಬಸವ ಬಂದುದ ಕಾಣದಿಹರಿ ೪

ಇಂದಿಗೆ ದಿನ ಸರಿಯೆಂದು ಪೊಂದಾಳವನಿತ್ತ
ನಂಬಿಯು ಹಳೆಯು ನೀನೆಂದು
ಸಂದ ಗಣಂಗಳ ಸಮ್ಮೇಳಮುಂ ಕೂಡಿ
ನಂದಿ ಮದ್ದಳೆಗಟ್ಟಿ ನಿಂದು
ಭೃಂಗಿಯು ಆನಂದಕ್ಕೆ ಭೂತಳ ಗಡಗಡ ನಡುಗಿ
ಅಂಧಕಸುರನನು ತುಳಿದು ಧಿಂಧಿಮಿ ತಾಳವನು ೫

ಮಾಯಾಕೋಲಾಹಳನೆಂಬ ಬಿರಿದ ಪ್ರಭುರಾಯು
ಕಟ್ಟಿದ ತೊಡರಿದಕೊ

ಮಾಯಮರ್ದಿಸಿ ನಿರ್ಮಾಯನೆಂದೆನಿಸಿದ
ಮಾಯೆರಹಿತ ನಿರ್ವಾಣಿ
ತೋಳನೆತ್ತಾಡಿಸುತ ತೋರುತ್ತ ಭಕ್ತರಿಗೆ
ಕಾಳಬಸವನಿಗಿತ್ತ ಕರದಲಿ ತಾಳವನು ೬

ತನ್ನ ವಿನೋದಕ್ಕೆ ನಮ್ಮ ನಿಮ್ಮ ಹುಟ್ಟಿಸಿ
ನಮ್ಮ ನಿಮ್ಮ ಹಮ್ಮನುಳಿದು
ನಮ್ಮಯ್ಯ ಮಾದಾರ ಚೆನ್ನಯ್ಯ ನಾನೆಂದು
ಇನ್ನೊಮ್ಮೆ ಸಾರಿ ಹೇಳಿದನು
ಕುನ್ನಿ ಮಾನವಗಳಿರ ಚೆನ್ನಾಗಿ ಕೇಳಿರೊ
ಚೆನ್ನಸಂಗಯ್ಯನೆ ಚೆನ್ನಬಸವಣ್ಣ ೭

ಒರಿಯ ಬೊಮ್ಮವ ನುಡಿವ ಭ್ರಷ್ಟರ
ಬಾಯಿಗೆ ಬೀಗ ಇದೆಕೊ
ಗುಂಟಲಗಾಣ ಗುಂಡು ನಡುನೆತ್ತಿಗೆ ಬಂದಂಥ
ನರಕಿಗಳಿಗೆದೆಗೊಂತ ಕರಿಯ ಬಸವನೆಂಬ ಗೂಟ
ಶರಣರ ಲೆಂಕರ ಲೆಂಕನ ಸಟೆಯೆಂಬ ದೂಷಕರ ಮಾತ
ಕೊರವ ಗರಗಸವಿದೆಕೊ ಕರಿಯ ಬಸವುಗನು ೮

ಹರಿ ನಾರಾಯಣನೆಂಬ ಕುದುರೆಯ ವಾಹನ
ಹರಿಗ್ಹನ್ನೊಂದನೆ ಅವತಾರ
ಕರಿಯ ಚರ್ಮಾಂಬರ ಕರದಲಿ ಬ್ರಹ್ಮನ
ಶಿರವ ಪಿಡಿದು ಚಕ್ರವಸೆಯ
ಅಜನ ಕಪಾಲವು ತುಂಬಿ ತುಳುಕಿತೆಂದು
ತ್ರಿಜಗ ತ್ರಿಶೂಲದೊಳಿಂದು ಮೆರುಳ್ಯರಿದು ೯

ಮುಸೆಕೊಂಡು ಮಾಸೆಕೊಂಡು ಮುಸೆಕೊಂಡೆಸೆದನು
ಬಸವನ ಮೇಲೆ ಅಸಮಾಕ್ಷ ಆದಿಯಲ್ಲಮನು
ಬಸವನ ಭವ ಹರಿಯಿತ್ತು ಬ್ರಹ್ಮಾಂಡದ
ಕಸವುಡುಗಿ ದೆಸೆಯೆಂಟು ದಿಕ್ಕಿನೊಳೆಲ್ಲ
ಎಸೆದವನಾರೆ ಸಹಿಸಿಕೊಂಡವನಾರೆಲವೊ ಭಲರೆ
ಬಸವಲಿಂಗಾಂಗಿ ಭಕ್ತರಪ್ರಿಯ ತಾನೆ ೧೦

ಉಗಹಾದಿಯ ಫಲವಿದು ಉರಿಲಿಂಗದೋದ್ಭವ
ಉಘೆ ಚಾಂಗು ಭಲರೆ ಬಸವನ

ಭವಹರಿದಂ ಬ್ರಹ್ಮಾಂಡದ ಬತ್ತಿ ತಲೆದೋರಿತ್ತು
ಉಗಹಾದಿ ತಿಂಗಳಿಂದಾತ್ತ ಪ್ರಭುವಿನ
ಆನಂದಕ್ಕೆ ಕುಂಭಿನಿಯು ಕುಂಭದೊಳು
ಯುಗವಡಗಿ ಕ್ರೋಧನಕ್ಕೆ ಶೋಧಿಸಿ ತನ್ನವರ ೧೧

ಲಂಕೆ ವಿಭೀಷಣನ ಪಣೆಯಂ ಲಿಖಿತವ ತೋರೆದಂ
ಲಂಕೆ ಹನುಮನ ಕಯ್ಯೊಳಗೆ
ಬಿಂಕವ ಮುರಿಸಿದರಿದು ಕಲಿಯುಗವಡಗಿದ ಮೇಲೆ
ಲಂಕೆಪಟ್ಟಣ ಸೂರೆಗೊಂಡು ನೀಂ ಪಾಡೆನಲವೊ
ನಾಯಕನರಕಿಗಳಿರಾ ಹೋ
ಲಂಕೆ ವಿಭೀಷಣನ ಪಟ್ಟದ ಕಡೆಯಂದು ೧೨

ಕುಡುಗಲೂರೆಂಬ ಪಟ್ಟಣದೊಳಗೆ ಚಾರಮನು
ಹರುಷದಿಂ ಪಟ್ಟಕೊಪ್ಪಿಹನು
ಕರಿಯೂರೊಳು ಕರಿಕಾಲ
ಚೋಳ ರಾಜ್ಯವನಾಳ್ದ
ಇರವ ನಾನೆಂತು ಬಣ್ಣಿಸುವೆನು
ತಿರುವಾಲೂರೆಂಬ ಪಟ್ಟಣದೊಳಗೆ ನಂಬಿಗೆ
ಸ್ಥಿರ ಪಟ್ಟಮಂ ಕಟ್ಟಿ ಗುರುಸಿದ್ಧ ನಂಜ ೧೩

ಕಲಿಯುಗ ಕಡೆಯಂ ಕುಂಭ ಕಾಳ ಬಸವಲಿಂಗ
ಕಲಿಭಕ್ತ ಕಲಕೇತಶರಣ
ಒಲಿದನ್ನನೆತ್ತಿ ತೋರಿಸಿ ತನ್ನ ಭಕ್ತರಿಗೆ
ಹಳೆಯರ ಹಳಿಯು ಮೊಮ್ಮಗನ
ಗೆಲುವಿಂದ ರಕ್ಷಾಕ್ಷಿಯೊಳಗೆ ತಾನಾಡಿಸುತ
ಪ್ರಳಯವು ಬಂದಿತು ಪಣೆಯ ಬರಹವ ತೊಡದುಂದನು ೧೪

ಸಂಕ್ರಾಂತಿಯ ಫಲವಿದಂ ಶಂಕರ ಪೇಳಿದ ನುಡಿ
ಮುಂಕೊಂಡು ಕೇಳಿದವರಿಗೆ
ಲೆಂಕರಿಗೆ ಶಂಕರ ತಾ ಕಂಕಣವ ಕಟ್ಟಿದ
ಕಂಕಣದ ಕರವ ತೋರೆಂದು ಕಿಂಕಿಣಿ ಕಿಣಿಕಿಣಿಯೆನುತ
ಚಿಟಿ ಚಿಟಿ ಭುಗಿ ಭುಗಿಲೆನುತ
ಶಂಕರನಾನಂದವ ನಾನೆಂತು ಬಣ್ಣಿಪೆನು ೧೫

ಸೊಕ್ಕಿದ ನರಗುರಿಗಳ ಗುಟ್ಟಿ ಮುರಿವೆನೆಂದು
ಠಕ್ಕುವೇಷಗಳ ಕೈಕೊಂಡು

ತಕ್ಕಡಿ ಗಿಡಿ ತತತ್ತಾಳೆಂಬ ತಾಳವನಿತ್ತು
ಅಚ್ಚರಿಯನಾರು ಅರಿಯರು
ಈ ಮರ್ತ್ಯಲೋಕವೆಂಬ ಮರವೆಯಿಂದಿಗೆ ಸರಿ
ಕರ್ತ ಕೂಡಲ ಚನ್ನಸಂಗಯ್ಯನಾಣೆ ೧೬

೧೪

ರಾಗ ॥ ಕೇತಾರ ಗೌಳ

ತಾಳುವನಲ್ಲ ಕೇಳಿರೋ ತಾಳಿ ಬೇಸತ್ತ
ಭಾಳಲೋಚನನಾಣೆಯೊ
ಏಳುನೂರೆಪ್ಪತ್ತೇಳು ಇಂದಿಗೆ ಸರಿ
ತಾಳದ ಬಸವ ಬಂದ ॥ ಪಲ್ಲ ॥

ನಟ್ಟ ಬಂದನು ಅಷ್ಟದಿಕ್ಕಿನಸೂತ್ರವ
ಮೆಟ್ಟಿಯಾಡಿಸುವ ತಾನು
ಕಟ್ಟಕಡೆಯು ಕೋಲಾಟವಾಡಿಸಿ ತಾನು
ಅರ್ತಿಯಿಂ ನೋಡಬಂದ ೧

ಎಂಟುದಿಕ್ಕಿನೊಳೆಂಟು ಜೋಡವಣಿಗಳನು
ಪಟ್ಟಿಸಿ ಕದನವಿಕ್ಕಿ
ತುಂಟಕಸೂಳೆಯರುಗಳ ಕೈಕೋಲಿಲಿ
ಕಂಟ ತಾ ಹೊಯಿದಾಡಿದ ೨

ಒಡೆಯು ಬಂಟನು ತಂದೆ ಮಡದಿ ಬಂಧುಗಳನು
ಒಡೆದು ತಾ ಜೋಡಕಟ್ಟಿ
ಮೃಡಸಿದ್ಧ ಬಸವ ನಟ್ಟುವ ಸೂಳೆಯರುಗ
ಳೊಡನೆ ತಾ ಹೊಯಿದಾಡಿದ ೩

ನೀಲಕಂಠನು ಕೋಲಾಟವಾಡಿಸಿ ತಾನು
ಲೀಲೆಯಿಂ ಸೂಳೆಯರ
ಕೋಲಾಟಕೆ ಚೈತನ್ಯ ತತ್ತ್ವಾಯೆಂದು
ಕೋಲು ಕೋಲಾಹಳದ ೪

ಕೋಲು ಕೋಲೆ ನಾರಸಿಂಹ ಹಿರಣ್ಯನ
ಹೀರಿ ಬಿಸಾಟ ಕೋಲೆ

ನಾರಸಿಂಹನ ತಲೆಗೆರೆ ಭಕ್ಷಿಸಲಾಗ
ವೀರಭದ್ರೇಶ ಕೋಲೆ ೫

ನಟ್ಟಿವ ತಾತನ ಕಿತ್ತು ಬಿಸಾಡಿದ
ಸೃಷ್ಟಿಯು ಪಾಪವನು
ನಟ್ಟಿವನೆಂದೆಂಬ ಪೆಸರ ನಮ್ಮಯ್ಯಗೆ
ಕೊಟ್ಟರು ಗಣಂಗಳು ೬

ದೃಷ್ಟಿ ಲಿಂಗದಿ ನಟ್ಟು ಕಷ್ಟ ಕರ್ಮವ ಸುಟ್ಟು
ಇಷ್ಟಲಿಂಗದಿ ಬಲಿದು
ಕಟ್ಟಿ ಕಾಲನ ಕೆಡೆಮೆಟ್ಟಿ ಕೂಡಲಸಂಗ
ತೊಟ್ಟ ಲಿಂಗಾಂಗವನು ೭

೧೫

ರಾಗ ॥ ಕೇತಾರಗೌಳ

ಕದನವಿಕ್ಕಿದ ನಮ್ಮ ಗುರುಸಿದ್ಧಬಸವೇಶ
ಹದನಾಯಿತೆಂದೆತ್ತಿದ ಗುರುಸಿದ್ಧರಾಮ
ಗುರುಸಿದ್ಧ ಗುರು ಕೊಡಲಿ ಗುರು ಕಳವು ಗುರು ಬಾಣವು
ಹದನರಿಯದ ಕುರಿಗಳಿಗೆ ಸಾರಿ ಹೇಳಿದೆನು
ಕದನವಿಕ್ಕಿದ ನಮ್ಮ ಗುರುಸಿದ್ಧಬಸವೇಶ
ಇದನರಿಯಿರಿ ಕಾಣಿರೊ ॥ ಪಲ್ಲ ॥

ಅರಮನೆಯ ಪೊಕ್ಕರು ಒಂದಾದಿಶಕ್ತಿಯರೆಲ್ಲ
ಬಿರಿದಿನ ಕಹಳೆಗಳ ಹಿಡಿಸಿದರು ಹಿಡಿಸಿದರು
ಅರಸು ಕೂಡಲ ಚೆನ್ನಸಂಗಮೇಂದ್ರನ ರಾಣಿ
ಭ್ರಮರಾಂಬಿಕೆ ನಿಂದಳು ೧

ಆರುಮುಖದ ಶಕ್ತಿ ಆರು ಸ್ಥಲದಿ ನಿಂದು
ಸೂರೆಗೊಟ್ಟಳು ಶೂಲದ ಹಬ್ಬಕೆ ಕುರಿಯ
ವಿಾರಿದವರ ಹಲ್ಲು ಕಳೆವುತ್ತಯೆಣೆ
ಕಾವೇರಿಯಮಧ್ಯದೊಳು ೨

ಎಡದಭಾಗದಲಿಯಷ್ಟರೆಗಟ್ಟಿ ಬೋರೈಸಿ
ಉಡುಗುಂತಿಹಳು ಮಾರಿ ಮರುಳುತಂಡವ ಕೂಡಿ
ನಡುಮಧ್ಯ ಕೈಲಾಸ ಕಾಡುವ ಕಣನೆಂದು
ಪಿಡಿದು ಕಾಲ್ವಿಡಿದೆಳದು ೩

ಸತ್ತೇಳು ಸತಿಯರು ಕೂಡಿ ಕೂಗೂರೆಂಬ
ಆರ್ತಿ ಆನಂದದಿ ಕೈಲಾಸವೆಂದು
ಮರ್ತ್ಯಂಗನೆ ಉಮೆಯು ಲಕ್ಷ್ಮಿಯರ
ಸತ್ಯಭೃತ್ಯಳಾಡುತಿಹಳು ೪

ಹತ್ತರೊಳೈವರ ಬಿಟ್ಟು ಐವರೊಳಿಬ್ಬರ ಬಿಟ್ಟು
ಒಪ್ಪವನಿಟ್ಟಳು ಮಾರಿ ಮರುಳು ಭೂತಕ್ಕೆ
ಮರ್ತ್ಯಂಗನೆಯಿವಳು ಭಕ್ತರಿಗೆ
ಭೃತ್ಯಳು ತೊತ್ತಳ ತುಳಿದಾಡಿದಳು ೫

ಇಂದಿನ ಶಿವಯೋಗವೆ ಕಡೆ ಕುಂಭಿನಿಯೆ ಕೈಲಾಸ
ಮುಂದಿಸೆ ಶಿವಯೋಗಕ್ಕೆ ನಂದಿಯು ಧ್ವಜವೆತ್ತಿ
ಸಿಂಧುಜೂಟನು ಸಂಗಮೇಂದ್ರನ ಶರಣರ ಆ
ನಂದದ ಶಿವಯೋಗವು ೬

೧೬

ರಾಗ ॥ ನಾದನಾಮಕ್ರಿಯ

ಪ್ರಳಯ ಬಂದಿದೆ ಕೊ ಪಾತಕರಿಗೆ
ಪ್ರಳಯ ಬಂದಿದೆ ಕೊ
ಇಳೆಯೊಳು ವೀರವಸವಂತರಾಯನು ಬಂದ
ಪ್ರಳಯ ಬಂದಿದೆ ಕೊ ॥ ಪಲ್ಲ ॥

ಹೊನ್ನು ಹೆಣ್ಣು ಮಣ್ಣೆಂಬ ಇವು ಮೂರು
ತಮ್ಮದೆಂದೆಂಬುವರ
ಬೆನ್ನ ಸಿಡಿಯ ಕಟ್ಟಿ ತಾಗಿಸಿ ಕಂಡವ
ಕುನ್ನಿನಾಯಿಗಳ ಬಿಟ್ಟು
ಷಣ್ಮುಖನಾಳಿನಾಳು ಹೇಳಿದ ಮಾತು
ನಮ್ಮವರಿಗೆ ಹಿತವು
ನಮ್ಮವರರಿಯದೀ ಕುನ್ನಿ ಮಾನವರಿಗೆ
ಬೆನ್ನ ಶೂಲವು ಇದೆ ಕೊ ೧

ನಿಲುವರೆ ತಾವಿಲ್ಲವೊ ನಿಂದಕರಿಗೆ
ಹೊಗುವರೆ ಮೆಳೆಯಿಲ್ಲವೊ
ಹಗರಣದಾಟಕೆ ನಿಂದ ವೀರ
ಕರಿಯ ಗುರುಬಸವೇಶನಾಣೆ

ಕರಿಯ ಬಸವನೆಂದೆಂಬ ಚಂದ್ರಿಕೆಯೊಳು
ಅಡಗಿತು ಅಕ್ಷರವು
ಮೃಡಶರಣರುಗಳು ಮುಕ್ತಿ
ಪಡೆದರೆಂಬ ಸಡಗರದೊಕ್ಕಣೆಯು ೨

ಅಂದುಂಟು ಇಂದಿಲ್ಲದೊ ಹಾಗೆಂದೆಂಬ ಸಂದೇಹಿ ಹಂದಿಗಳ
ಚಂದ್ರಶೇಖರಮುನಾಳು ಮರ್ತ್ಯವ ತುಳಿ
ದಂದವನೇನೆಂಬೆನು
ಸಂದ ಪುರಾತರೆಲ್ಲ ಹೊನ್ನಾಂಬಿಕೆ
ಅಂಗದೊಳಡಗಿದರು
ಮಂಗಳಾತ್ಮಕ ಚೆನ್ನಗಂಗೆಯೊಳೊಡ
ಗೂಡಿದಂದವನೇನೆಂಬೆನು ೩

ಕಾಳಿ ಕಂಕಾಳಿಯೆಂದು ಹೇಳಿದೆ ನಾನು
ದ್ವಾಳಿ ಹೊರಟಳುಯೆಂದು
ಗೂಳಿಯು ತೆರಳಿತು ಏಳು ನೂರೆಪ್ಪತ್ತು
ಏಳು ಇಂದಿಗೆ ಸರಿಯು
ಧಾಳಿ ಬಂದಿತು ರಕ್ತಾಕ್ಷಿ ನಮ್ಮವರಿಗೆ
ಭಾಳಲೋಚನ ಹೇಳಿದ
ಬಾಳು ಬಟ್ಟಲು ತುಂಬಿ ವಾಲಿ ಭಂಡಾರವು
ಸೂರೆಯಾಡಿದರುಯೆಂದು ೪

ಬಾಲಿಯು ಬಸವನೆಂದು ಹೇಳಿದೆ ನಾನು
ಸೂಳೆಯರುಗಳಿಗೆಲ್ಲ
ಆಳಿನ ಆಳೆಂಬ ಅರುಹು ಭಂಡಾರವು
ಸೂರೆ ನಮ್ಮವರಿಗೆಂದು
ಹಳೆಯು ನುಡಿದ ನುಡಿಯು ಹಾರೈಸಿದ
ಗುರುಭಕ್ತ ತಾ ತಿಳಿದು
ತನ್ನೊಳಗ ನೋಡಿದ ಒಬ್ಬ ನಿತ್ಯನಿಗಲ್ಲದೆ
ಆಳವಲ್ಲ ಅಸಾಧ್ಯವು ೫

ಉತ್ತರದೇಶದಿಂದ ಚಂಡಿಕದೇವಿ
ತತ್ತನೆ ತರಿದಾಡುತ
ಭಕ್ತಿಯ ಪ್ರಿಯೆ ಭವಾನಿ ಬಂಡಿಯ
ಕಟ್ಟಿ ದಕ್ಷಿಣಕಿದಳು ಬಂದ

ದಕ್ಷಿಣ ಕಾವೇರಿಯ ಮಧ್ಯದೊಳೊಂದು
ಅರ್ತಿ ಗಂಗಾಪುರವು
ವಿಸ್ತರಿಸುವರಳವಲ್ಲ ವಿವಾಹದ
ಉಚ್ಚಹವೇನೆಂಬೆನು ೬

ಆದಿಕೈಲಾಸವಿದು ಅನಾಥರ
ಕಾಯ್ದು ರಕ್ಷಿಪ ತಾವಿದು
ಆರುಷಟ್ಸ್ಥಲ ವಿಚಾರಿದಾಚಾರ್ಯ ಅಧಿಕ
ಅನಾದಿ ಜಂಗಮರಾಯನು
ರಾಯರಾಯರುಗಳೆಂಬ ರಾಯರುಗಳ
ಬಾಧಿಸಿ ಕೊಲೆಯ ಕೊಂದ
ಕಾಳಗ ಹಣ್ಣಿ ತಾ ಕಡೆಯ ಕಂಭದ
ಕಾವೇರಿಮಧ್ಯದೊಳು ನಿಂದು ೭

ಕುಂಭ ಕುಂಭವುಯೆಂಬಿರಿ ಕುರಿಗಳೆಲ್ಲ
ಕುಂಭವರಿಯದಿಹರಿ
ಕುಂಭಬಸವ ಕೂಡಿ ಸಂಗಶರಣರೊಳು
ನಿಂದುದೆ ಕಡೆಯ ಕುಂಭ
ಕುಂಭಕೆ ಬಂದನಲ್ಲ ಕೂಡಲಸಂಗ
ಕುಂಭೇಶನೊಡಗೂಡಿದ
ಸಂಭ್ರಮವೇನ ಬಣ್ಣಿಪೆ ವೀರ
ವಸವಂತಲಿಂಗಯ್ಯ ತಾನಾದುದ ೮

೧೭

ರಾಗ ॥ ವರಾಳಿ

ಹುಟ್ಟಿಸಿದರೆ ಹುಟ್ಟಿಸಿದೆ ಭ್ರಷ್ಟಮಾನವರಿರ
ನಷ್ಟವಾವುದುಯೆನಗೆ
ನಟ್ಟದೃಷ್ಟಿಗೆ ಒಡೆಯ ಕರ್ತ ಕೂಡಲಸಂಗ
ಮೆಟ್ಟಿ ಆಡುವ ಅವನೆ ॥ ಪಲ್ಲ ॥

ತಿಟ್ಟಿಯ ಮರಣ ಆರುವೆ ಕಟ್ಟಿ ಕಾಲೊಳು
ಬಿರಿದೆತ್ತಿ ಆಡುವನಾರೆಲೊ
ಸೃಷ್ಟಿ ಆಡುವ ಕೂಡಲಸಂಗಮೇಶ್ವರನೆಂಬ
ತೊಟ್ಟಿಲೊಳಗೆಯಿಹೆನು ೧

ಕಾಳಿ ಬಿದ್ದಿತುಯೆಂಬ ಹೀನಾಯ ಹೊಲೆಯನದೆ
ಕಾಲಕಾಲಾಂತಕನು
ಕಾಲಾಗ್ನಿ ವಿಷವ ಕಂಠದಿ ತಾಳ್ದ ಸಂಜೀವಿನ
ಆಳಿನ ಕೀಳ ನಾನು ೨

ನಾನೆಂಬುದನಳಿದು ತಾತಾನೆ ತಾನಾದವರ
ನಾನವರ ಹಳೆಯನೆಂಬೆ
ನಾನು ನೀನೆಂಬ ಸಂದೇಹವಳಿದು ಶರಣ
ತಾನೆ ಬಲ್ಲನುಯೆನ್ನನು ೩

ನಾನು ರಾಜನು ನನ್ನದು ಹೆಣ್ಣು ಹೊನ್ನು ಮಣ್ಣು
ನಾನೆಂಬುವರು
ಅವರು ನಾಯಪಾತ್ರೆಯೊಳುಂಡು ನರಕದೊಳು
ಬಿದ್ದಿಹ ನರಕಿಗಳರಿಯರೆನ್ನ ೪

ನೇಣುಕಾಳಿಯು ವಿರಹಗ್ರಾವು ಆವರಿಸಿತ್ತು
ಏನೆಂಬೆನೀ ಪರಿಯ
ಸೀಮೆ ಸೀಮೆಯೊಳುಳ್ಳ ಮಂತ್ರ ತಂತ್ರಗಳನು
ಗೋಣನರಿವ ಭೂತವು ೫

ಭಕ್ತಿ ಬಾಲಗ್ರಹ ಮೆಟ್ಟಿ ಸೋಮೇಶ್ವರನು
ಕರ್ತ ಬಸವರಾಜನು
ಕೆಟ್ಟುಹೋದೆನು ಧರೆಯ ಮಾನವನಳಿದನು
ಮೂರ್ಖರಾಳಾದವನು ೬

ಗಂಗಾಧರನೆಂಬ ಗ್ರಹ ನಂಬಿಯ ತೋಟದಲಿ
ಇಂಬಾಗಿ ನೆಲಸಿಹನು
ಶಂಭು ಶಂಕರನು ನಿರಂಜನ ಗುರುಸಿದ್ಧ
ಲಿಂಗನೆ ತಾನೆ ಬಲ್ಲ ೭

## ೧೪

### ರಾಗ ॥ ಕೇತಾರಗೌಳ

ಗುಂದ್ದಲಿಯ ಪಿಡಿದಿಂದು ಸಿದ್ಧ ಬಸವಲಿಂಗ
ಸಿದ್ಧವೀರನು ಪ್ರಭು ಸಿದ್ಧರಾಮ
ಮರ್ದಿಸಿ ಮರ್ತ್ಯಲೋಕದೊಳಿಂದು ಮಹಘನವ
ಉದ್ಧರಿಸುವರೆ ಬಂದ ॥ ಪಲ್ಲ ॥

ಉಚ್ಚಹದ ಡಂಗುರವೆತ್ತಿ ಸಾರಿದೆ ನಾನು
ಮಚ್ಚರಿಸಿದ ದೂಷಕರ ಗಂಡನೆಂದೆನಿಸಿ
ಅಪ್ರತಿಮಲಿಂಗವಲ್ಲದೆ ಮಿಕ್ಕಿನ ದೈವಗಳು
ಉಚ್ಚೆ ನರಕಕೆ ಸರಿಯು ೧

ನರಕವ ಕಲಸುವ ನರಕಿಗಳೆಲ್ಲರು ಕೂಡಿ
ನರಕವ ತಿಂದು ನರಕಿಗಳು ನಲಿದಾಡಿ
ಗುರುವ ನಿಂದಿಸಿದ ಕಾರಣದಿಂದ ನರಕಿಗಳು
ಹರುಷದಿಂ ಕುಣಿದರೆಲ್ಲ ೨

ಏಕೋದೇವನೆ ದೇವ ಈ ಪರಿಯೆಂದರಿಯೆವೊ
ಕಾಕುತನದಲಿ ಕಯ್ಯ್ಹೊಯ್ದುದ ನಾಗದೇವೊ
ನೀತವೆ ಕೇಳ್ನಿನ್ನ ಮರಸಿ ಕೊಲ್ವರೆಯೆಮ್ಮ
ಪಾತಕರೆದೆಗೊಂತವೆ ೩

ಕೀರ್ತಿಮುಖವನಿಟ್ಟು ಪ್ರೀತಿಯು ಸಲಿಸುತ್ತ
ಆತ ಕೂಡಲಚೆನ್ನಸಂಗ ಬಸವನು
ಏತಕೆಯೆನ್ನೊಳು ಪಂಥ ಸಲ್ಲದು ನಿಮಗೆ
ಹೇತು ತಿಂಬಾಟ ಬಂತು ೪

ರಕ್ಕಸ ಬ್ರಹ್ಮಯ್ಯನವರ ಬೊಕ್ಕಸದೊಳಿಗದವನು
ಸೊಕ್ಕಿದವರನು ಸೀಳ್ದು ಭಕ್ಷಿಸುತಲಿ ಬಂದ
ಚಿಕ್ಕಬಸವುಗನೆಂಬ ಅಪ್ರತಿನಾಮವನಿಟ್ಟು
ಎತ್ತಿದೆ ಮಹಗುದ್ದಲಿಯ ೫

ಹಮ್ಮು ಬಿಮ್ಮುಗಳೆಂಬ ಬೊಮ್ಮವ ಅಗೆವುತ್ತ
ಧರ್ಮಸ್ವರೂಪ ಧರೆಗಿಳಿದು ಬಂದುದನು
ಕರ್ಮಿಗಳು ಕಾಣರು ಕರಿಯ ಬಸವನೆಂಬ
ನಿರ್ಮೋಹಿಲಿಂಗವನ್ನು ೬

ವೀರ ಅಸಹಾಯಶೂರ ಹಮ್ಮೀರನು
ವೀರ ಗುದ್ದಲಿಯ ಪಿಡಿದಿದ್ದಹರ ಭಾವ
ತಾರಕಾರಿ ವೀರಕಂಠೀರವ ಬಸವಕೊ
ಮೂರ ರಾಜೇಂದ್ರರಾಯ ೭

ಅಷ್ಟಮದವೆಂಬ ತಿಟ್ಟುಗಳಗೆದು ಕೆಡವುತ್ತ
ಸಪ್ತವ್ಯಸನಗಳೆಂಬ ಹಳ್ಳವ ಹೂಳಿಗಟ್ಟಿಸಿ
ಘನಗುರುಲಿಂಗವಾಚರಣೆಯು
ವಿಸ್ತರಿಸುವರೆ ಒಂದ ೮

ಮತ್ತೆ ತ್ರಿಗುಣಗಳಡ್ಡಯಿಸುತ್ತ ಪಿಂಡಾಂಡದೊಳು
ಭಕ್ತಿ ಜ್ಞಾನ ವೈರಾಗ್ಯವನಳವಡಿಸಿ
ಮುಕ್ತಿಯಿಂದತ್ತ ತಾ ಮೀರಿ ತೋರುವ ಘನವ
ಅಪ್ರತಿಮಲಿಂಗದೊಳು ೯

ಆಯೆಂಬ ನುಡಿಗೇಳಿ ಅರುಹೆಂಬ ಸದ್ಭಾವು
ವಾಯೆಂಬ ನುಡಿಗೇಳಿ ಒಂದೆ ರೂಪಾಗಿ
ದೇವರದೇವ ಮಹಾಘನಲಿಂಗ
ಐವಾಯೆಂದು ಕೂಡಿದನು ೧೦

ಇಂತಿವರುಗಳಂತರಂಗದೊಳಗೆ ನಿಂದು
ಕಂತುಕಾಲನ ಬಾಧೆಯ ಕೆಡಹಿ ಷಡುಸ್ಥಲವನರುಪಿ
ಪಂಥವೆಂದೆನಿಸಿ ತಾ ತಾನೆ ತಾನಾದ ನಿ
ಶ್ಚಿಂತ ಗೊಹೇಶ್ವರನು ೧೧

೧೯

ರಾಗ ॥ ಆಹಿರಿ

ಆರಿಗುಸುರುವೆನು ಅಪ್ರತಿಮಕರುಣಾಕರ ಕರಿಬಸವ
ಧರೆಗಿಳಿದು ಸಾರಿದುದ ಆರಿಗುಸುರುವೆನು ಅಪ್ರತಿಮ ॥ ಪಲ್ಲ ॥

ಗುರುವಾರ ಸಂಹಾರಕೈತಂದು ಸಂಗಯ್ಯ
ಗುರು ಪೆಟಲುಗುಂಡುಗಳ ಮೇಳೈಸಿ
ಧರೆಯೊಳಗೆ ಗಂಡಹಾರವನೆತ್ತಿ ಗುಮ್ಮಟವ ಹೊಯಿಸಿ
ಅರಸು ಬಂದನು ಅಧಿಕ ಆದಿತ್ಯವಾರ ೧

ಗುರುಬಸವನಂಗಡಿಗೆ ಕಿಚ್ಚನಿಕ್ಕಿದರೆಲವೊ
ನಿರುತವಿದು ಮಾರಿಯಂಗಡಿ ಹತ್ತಿ
ಮರವೆಂಬ ಪುರ ಬೆಂದು ನಿಲಬಾರದೆಲವೊ ಇವರ
ತೆರನ ಬಲ್ಲವರಿಲ್ಲ ಗುರುಬಸವನಾಣೆ ೨

ಹರಿಯು ಹರ ಬ್ರಹ್ಮಾದಿಗಳು ಕಾಣಲರಿಯರೆಲೊ
ಪರಮ ಪರತತ್ವಕ್ಕೆ ಸಿಲುಕದಿಹ ಅಪ್ರತಿಮ
ಗುರುಗೋಹೇಶ್ವರಲಿಂಗಲೀಲೆ ನಮ್ಮ
ಶರಣರಿಗಸಾಧ್ಯವಿದು ಗುರುಬಸವನಾಣೆ ೩

ಡವುಡೆಯಂ ಪಿಡಿದ ಕುರುಹಂ ಪೇಳ್ವೆ ಕೇಳಿರೆಲೊ
ಡವುಡೆಯಂ ಪಿಡಿವ ಕುರುಹಂ ಪೇಳ್ವೆ ನೋಡಿರೆಲೊ
ಡವುಡೆಯಂ ಪಿಡಿದ ಭಾವವನು ಚೆಲ್ವ
ಡವುಡೆಯಂ ಪಿಡಿದ ಡವುಡೆಯು ಕರಿಯಬಸವ ೪

ಏಕಡವುಡೆಯು ಪಿಡಿದು ಲೋಕಾದಿಲೋಕಂಗ
ಳೇಕವಂ ಮಾಡೀಗ ನಾಲ್ಕೆಂಟು ದಿಕ್ಕಿನೊಳು
ಏಕೋದೇವನೆ ದೇವನೆಂದು ನರಕಿ
ಕಾಕಂಮನುಜರು ಕಯ್ಯ ಕುರುಹ ಬಿಸುಟರು ೫

ಜಪ ತಪದ ನೇಮದವರಿಪರೀತವನೇನೆಂಬೆ
ಆಪರಾಪರಪರಿಮಿತ ಗುರುಬಸವನಂ ಜರರು
ಕಪಿಯಂತೆ ತಮ್ಮ ನರಕವನು ತಿಂದು
ಕುಕು ಕುಕುಕು ಕುಯೆಂದು ಕುಣಿವುತಿದೆ ಲೋಕ ೬

ಎತ್ತಿಸಾರಿದ ಬಿರಿದ ವ್ಯರ್ಥವೆಂದಿರಬೇಡ
ಮಕ್ಕಳಾಟಕೆ ಬಂದು ಭಕ್ತರಿಗೆ ಹಿತವಾಗಿ
ಅಪ್ರತಿಮಲೀಲೆಯಿದೆಯೆಂದು ನಮ್ಮ
ಕರ್ತೃ ಕೂಡಲಚೆನ್ನಸಂಗ ಪೇಳ್ದುದನು ೭

ಮಾಯಾಕೋಲಾಹಳನೆಂಬ ವಿಲಾಸದ ತೊಡರ
ಕಾಲೊಳಗೆ ಕಟ್ಟಿ ಕರಿಬಸವ ಬಿರಿದಾಂಕ
ತಾನೆಂದು ನಿಂದ ಧರೆಯೊಳಗೆ ಮಹಿಮಾಯ
ಸಂಹರಿಸಿ ಮಾನಿನಿಯ ಕೂಡಿದುದ ೮

## ೨೦

ರಾಗ ॥ ನಾದ ನಾಮಕ್ರಿಯೆ

ಭಕ್ತಜನರು ಭಾಪು ಭಾಪುರೆಂದು ಶರಣನಯೆಂದು ಶರಣನ
ಅರ್ತಿಯಿಂದ ಪಾಡಿ ನಮ್ಮ ಆದಿ ಬಸವನ ॥ ಪಲ್ಲ ॥

ಅಷ್ಟಮದಗಳೆಂಬವೆಂಟ ಮೆಟ್ಟಿ ಸೀಳ್ದನ ಮೆಟ್ಟಿ ಸೀಳ್ದನ
ಇಷ್ಟಲಿಂಗದಲ್ಲಿ ನಟ್ಟುಗಟ್ಟಿಗೊಂಡನ
ದೃಷ್ಟಿಲಿಂಗದಲ್ಲಿ ನೋಡಿ ವೀರನಾದನ ವೀರನಾದನ
ಅಷ್ಟದಿಕ್ಕಿಗಧಿಕ ನಮ್ಮ ಅರಸು ಬಸವನ ೧

ತ್ರಿಗುಣಗಳನು ದಹಿಸಿದ ತ್ರಿಪುರಾಂತಕಭವನ ತ್ರಿಪುರಾಂತಕಭವನ
ತ್ರಿವಿಧಲಿಂಗವನ್ನು ತೋರಿ ತ್ರಿಣಯನಾದನ
ತ್ರಿವಿಧಪದಾರ್ಥವನು ಸವಿದು ತ್ರಿವಿಧನಾದನ ತ್ರಿವಿಧನಾದನ
ತ್ರಿಭುವನಕ್ಕೆ ತಾತ ನಮ್ಮತೀತ ಬಸವನ ೨

ಪರಮಪರತತ್ವ ಹತ್ವ ಮಂತ್ರಶೀಲನ ಪಾತ್ರಶೀಲನ ಪಾತ್ರಶೀಲನ
ಸುರರು ಅಸುರ ನರರ ಮೂಗ ಕೊರೆದ ಮಹಿಮನ
ಗುರುಕರಜಾತ ಗುರುಬಸವಲಿಂಗನ ಬಸವಲಿಂಗನ
ಹರುಷದಿಂದ ಪಾಡಿ ನಮ್ಮ ಗುರುಗೊಹೇಶನ ೩

೨೧

ರಾಗ ॥ ಕೇತಾರಗೌಳ

ಕಂಡಿರೆಲವೊ ಎನ್ನಗಂಡನ ಸುದ್ದಿಯ .
ಮುಂಡೆ ಮುತ್ತೈದೆಯಾದ ಚಂಡಿದೈವದ
ಗಂಡ ಸಂಗಮೇಶ್ವರಸಿದ್ಧ ಮಂಗಳಾತ್ಮಲಿಂಗವ ॥ ಪಲ್ಲ ॥

ಆಕಾರವಿಲ್ಲ ನಿರಾಕಾರಲಿಂಗವು
ಆಕಾರವಾದುದನು
ಸಾಕಾರವಳಿದಿಹ ಸತ್ಯ ಭಕ್ತರೊಳು ತಾ
ಏಕವಾಗಿರ್ದುದನು
ಆಕಾರ ಚಿತ್ತ ನಿರಾಕಾರ ಜಂಗಮ
ಏಕೋಭರಿತನಾದುದ
ಜಾತಿಸೂತಕವಳಿದಿಹ ತನ್ನ ಭಕ್ತರೊ
ಳೇಕವಾಗಿರ್ದುದನು ೧

ಅಣುರೇಣುತೃಣಕಾಷ್ಟ ನೆನಹಿನೊಳಿಹಯೆನ್ನ
ಗುಣಮಣಿ ನಿಶ್ಚಿಂತನು
ಕನಸಿನೊಳಗೆಯೆನ್ನ ತನುವುಟ್ಟ ತಂದೆಯ
ಘನವ ಕಂಡವನಾರೆಲೊ
ಅಜಹರಿರುದ್ರರು ಆದಿಯ ಕಾಣದ
. . . . . . . . ಳಗಾದರೆಲ್ಲ ಮುದ

ಗಜಸುರರೆಲ್ಲ ಅರಿದಲೆಯಾದರು
ಗುರುವ ಕಂಡವನಾರೆಲೊ ೨

ದೇವನಸಭೆಯೊಳಗಿರ್ದ ದೇವತೆಗಳು
ಮೂವಿಧಿಗೊಳಗಾದರು
ದೇವಂಗೆ ಮಗಳ ಕೊಟ್ಟೆಹೆನೆಂಬ ಹಮ್ಮಿಂದ
ಮೇಯೆಂಬ ತಲೆಯಾಯಿತು
ದಕ್ಷಂಗೆ ಕುರಿತಲೆ ಶುಕ್ರಂಗೆ ಕಣ್ಣಿಲ್ಲ
ಮಿಕ್ಕಿನವರ ಪಾಡೇನು
ಮುಕ್ತಿದಾಯಕ ಗುರು ಚಿಕ್ಕಬಸವರಾಜ
ಕರ್ತೃವೆ ತಾನಾದನು ೩

ಲಕ್ಷದ ಮೇಲೆ ತೊಂಬತ್ತಾರು ಸಾವಿರ
ಕರ್ತೃವೆ ತಾವೆಂಬರು
ಕರ್ತೃ ನಿರಂಜನ ಗುರುವ ಮರೆದರೆಂದ
ಮದ್ದೀರ ಸುರೆಯಲಿತ್ತ
ಮಿಕ್ಕಿನವರುಗಳೆಲ್ಲರು ಜಂಗಮರೆ ತಾವು
ಸತ್ತುಹುಟ್ಟುವರೆಲ್ಲರು
ಸತ್ಯಶರಣರಿಗೆ ತೊತ್ತಿನ ಮಗನೆಂದು
ಮರ್ತ್ಯದೊಳಗೆ ಸಾರಿದೆ ೪

೨೨

ರಾಗ ॥ ಆಹಿರ

ಕಾಣಬಾರದು ಕರ್ಮಿಗಳಿಗೆ
ಎನ್ನ ಪ್ರಾಣನಾಯಕನಿರವು
ಜಾಣಗರಿದರಿದು . . . . . . .
ಕಾಣಬಾರದು ಕರ್ಮಿಗಳಿಗೆ ॥ ಪಲ್ಲ ॥

ಕಯ್ಯೊಳಗೆ ಲಿಂಗವಿರೆ ಕಾಣಬಾರದು ಭವಿಗೆ
ಮೆಯ್ಯ ಸೋ[ಕಿಹ ಲಿಂ]ಗ ಮೆಚ್ಚರಿಸುವಾನಂದ
ಐ . . . . . ಅಂಗವಸ್ತ್ರದಲಿ ಇಹುದು
ಕಯ್ಯೊಳಗೆ ಕಾಣಿಸುವ ಲಿಂಗವಂತಂಗೆ ೧

ಮಣಿಖಚಿತಮಂಟಪದ ಮಧ್ಯದೊಳಗಾ ಲಿಂಗ
ಕಣಿಯು ಪೀಠದ ಮೇಲೆ ಕಾಣಬಾರದ ಹಾಗೆ

ತ್ರಿಣಯ ಗುಣಮಣಿ ಶಾಂತಲಿಂಗ
ತನ್ನ ಅನುವ ತಾನೆ ತೋರುವ ಲಿಂಗವಂತಂಗೆ ೨

ಕಾಯದೊಳು ಗುರುಲಿಂಗ ಜಂಗಮದ ತಿಂತಿಣಿಯು
ದೇವ ನಿಜಕರಪೀಠಮಧ್ಯದೊಳು ನೆಲೆಗೊಂಡು
ಭಾವವನು ತಿಳಿದು ತನ್ನೊಳಗೆ ದೇಹದೇವಾಲ್ಯ
. . . , . . . . . . . . . , . . . . . . . . . . . ೩

ದೇವನೆ ದೇವಾಲ್ಯವಾಗಿ ಭಕ್ತನಿಗೊಲಿದು
ಭಾವವೆ ಬ್ರಹ್ಮರೂಪಾಗಿ ಒರಿದಾಗಿಹುದು
ದೇವನೊಳು ಭಕ್ತ ನೆಲೆ[ಯಾಗಿಹನೆಂಬವ]ರ
ಭಾವವರಿದಿಹ ಶರಣಲಿಂಗವಂತನಿಗೆ ೪

ದೇವದೇಹಿಕ ಭಕ್ತ ಭಕ್ತದೇಹಿಕ ದೇವ
ದೇವನೆ ಭಕ್ತನೆಂಬುದನರಿಯು
ಮಾಯಕೋಳಾಹಳನೆಂದೆಂಬ ಬಿರಿದ ಕಾಲೊಳಗೆ
ಕಟ್ಟಿದನು ಕರಿಯಬಸವಪ್ರಗನು ೫

ನಾನು ನೀನೆಂಬ ಸಂಶಯವಳಿದ ಸಂಧಾನಿ
ನಾನು ನೀವೆಂದೆಂಬ ಉಭಯವಳಿದು
ಆ ಮಹನೆನ್ನಿ ತಾನಾದನಂತು
ಅಂದು ಗುರುಗೊಹೇಶ್ವರಲಿಂಗಸಂಗ ೬

ಲಿಂಗ ಉಂಟಿಲ್ಲವೆಂಬರು ಹಂದಿಮಾನವರು
ಲಿಂಗಬಿದ್ದಿತು ಲಿಂಗದೊಳಗೈಕ್ಯವೆಂಬವರ
ಮುಂದಲೆಯ ಕಟ್ಟಿ ಕಾಲ್ಗಡಿದು
ಅವರ ಕಂಡಗಳ ತಿನಿಸಿದನು ಲಿಂಗಬಸಮಯ್ಯ ೭

ಲಿಂಗಾಂಗ ಲಿಂಗೈಕ್ಯ ಲಿಂಗದೊಳಗೊಡವೆರದ
ಲಿಂಗಾಂಗ ಸಂಗ ಶರಣನ ಬಾಗಿಲನು ಕಾಯ್ದು
ಕೊಂಡಿಪ್ಪೆ ಸಾನಂದದಲಿ ಸಲಹಿ
ತಂದ ಕೂಡಲ ಚನ್ನಸಂಗಯ್ಯನನುವ ೮

೨೩

ರಾಗ ॥ ಸಾವೇರಿ

ಹೇಳುವೆನು ಕಣೆಯು ಕೇಳಿ
ಭಾಳಲೋಚನನಟ್ಟಿ ಸೇವಕನ ನುಡಿಗೇಳಿ

## ೩೭ ಕರಿಬಸವೇಶ್ವರನ ವಚನ

ಸೇವಕನ ನುಡಿಗೇಳಿ ಸೇವಕರಾಗಿಹರು
ಹೇಳುವೆನು ಕಣಯು ॥ ಪಲ್ಲ ॥

ಕಾಮ ಕ್ರೋಧಂಗಳು ಮದ ಮಚ್ಚರ ಭವಿಗಳ ಕಳಿದು
ನಾನೆಂಬುದ ಸುಟ್ಟಲ್ಲದೆ ತಾನಾದುದಿಲ್ಲ
ಹೀನಮಾನವಗಳಿರ ನಾನೆ ಭಕ್ತನುಯೆಂಬ
ನಾಲಿಗೆಗಳ ಕೊಯ್ವುತ್ತ ನಂಜುಂಡವನೈತಂದ ೧

ಜಂಗಮವೆ ಪರವೆಂದು ಲಿಂಗದ ನುಡಿ ಸಾರುತಲಿದೆ
ತಮ್ಮಂಗದ ಲಿಂಗವ ಕಾಣದ ಭಂಗಭ್ರಷ್ಟರಿರ
ಲಿಂಗ ಜಂಗಮ ನಾನೆಯೆಂಬವರ ಮಸ್ತಕಕೆ
ಅಂಬಿಂದೆನ್ನನು ತಂದನು ಸಂಗಮೇಶ್ವರನು ೨

ಅಷ್ಟದಿಕ್ಕಿನರಾಯ ಆದಿಕೂಡಲಸಂಗ
ಕಟ್ಟಿಗೆಯನು ಕೈಲಿತ್ತು ತಳವಾರಿಕೆ
ಕೊಟ್ಟು ಸತ್ತು ಹೋಗುವನಲ್ಲ ನಿತ್ಯನವಂಗ ನಾನೆಂದು
ಭಕ್ತರಿಗೊಪ್ಪವ ನಿತ್ಯಸತ್ಯದ ವಾಲಿದೇಕೊ ೩

ಮುಪ್ಪುರಗಳ ಸುಟ್ಟಭವಗೆ ಕಪ್ಪರ ಎಡಗಯ್ಯೊಳಗೆ
ಭಕ್ತರ ಇಚ್ಛೆಯು ಉಂಬ ಮುತ್ತಕ ಪರಶಿವನು
ಹೊತ್ತನು ಕಿರುಜಡೆಯೊಳಗೆ ಮುತ್ಯಂಗನೆ ಸತಿಯನು
ರಕ್ತಾಕ್ಷಿಗೆ ರಸತುಂಬಿ ನೆತ್ತರ ವಸವಂತ ೪

ಗುಮ್ಮಳಾಪುರದೊಳಗೆ ಗುರುಚೆನ್ನಬಸವೇಶ
ಚಿನ್ನದ ಕಂತೆ ಕಮಂಡಲವ ಸಹವಾಗಿ
ಉನ್ನಂತವಾಗಿಹ ಕಯ್ಯೊಳು ಲಾಕುಳದಂಡ
ಚೆನ್ನಬಸವೇಶಗುರು ನಮ್ಮಯ್ಯ ಬಂದ ೫

ಕಸಗಳ ಗುಡಿಸುತ ಬಂದೆನು ಶಶಿಮುಖಿ ನೀ ಕೇಳಮ್ಮ
ಶಶಿಧರನ ಭಕ್ತರಿಗೆ ಉಸಿರುವೆನೀ ಕೃತಿಯು
ಅಸಮಾಕ್ಷಲಿಂಗದಲಿ ಆದಿಯ ಕಂಡವಗೆ
ಬಸವಗಣಂಗಳ ತೊತ್ತಿನ ತೊತ್ತಿನ ಮಗಳು ೬

ಕಲಿಯೆಂಬ ಕಸಹೆಚ್ಚಿ ಕಸಹಿಡಿಗಲ ಕೈಲಿತ್ತು
ಕಲಿಭಕ್ತರಮಗ ನಾನು ಕಡೆಪುಟ್ಟಲಿದೇಕೊ
ಕಲಿದೇವರದೇವಯ್ಯ ಕಲ್ಲೇಶ್ವರಲಿಂಗಯ್ಯ
ತಾನೊಲಿದವರಿಗೆ ಉಂಟಯ್ಯ ವಲ್ಲದವಗಿಲ್ಲ ೭

೨೪

ರಾಗ ॥ ಆಹರಿ

ಪ್ರತಿಯಿಲ್ಲದಪ್ರತಿಮಲಿಂಗ
ಪಾಪದತಿಶಯದ
ಪಾಪಿಗಳಿಗತಿಶಯದ ಲಿಂಗ
ಪ್ರತಿಯಿಲ್ಲದಪ್ರತಿಮಲಿಂಗ ॥ ಪಲ್ಲ ॥

ಪಂಚಮುಖವತಿಗಳೆದ ಪರಮಪಾವನ ಲಿಂಗ
ಮಹಪಾತಕರು ಕಾಣಬಾರದ ಲಿಂಗ
ಪಂಚಾಕ್ಷರಿಯೆ ಪ್ರಣಮಲಿಂಗ
ಬಾಹ್ಯಪಂಚಾಕ್ಷರಿಗೆ ನಿಲುಕದನುಮಿಷಲಿಂಗ ೧

ಸುರರು ಅಸುರರಿಗೆಲ್ಲ ವಿರಸವಾಗಿಹ ಲಿಂಗ
ಹರಿ ಬ್ರಹ್ಮ ರುದ್ರರಿಗೆ ಪರವತೋರದ ಲಿಂಗ
ಶರಣರಿಗೆ ಹೃತ್ಕಮಲಲಿಂಗ
ಬಾಯಬರಿಯ ಬೊಮ್ಮ ಭಂಗಿಸಿದ ಬಸವಲಿಂಗ ೨

ಕಾಲಕಾಮಾದಿಗಳ ಕಡಿದ ಕಾಮಿತಲಿಂಗ
ತಾನೆ ತಾನೊಲಿದು ತನ್ನೊಳಗೆ
ನೆಲೆಗೊಂಡ ನಿಸ್ಸೀಮ ಶರಣಾಗತಲಿಂಗ
ಅವವಯವ ಹೇಳುವನು ಹೆಸರಿಲ್ಲ ಕುರುಹಿಲ್ಲ ೩

ಹೆಸರಿಲ್ಲದ ಲಿಂಗ ಬೆಸುಗೆ ಸಡಿಲದ ಲಿಂಗ
ಕುಶಲಭಕ್ತರ ಬೆರಸಿ ಕೂಡಿ ಆಡುವ ಲಿಂಗ
ಅಸಮಾಕ್ಷದಾನಂದಲಿಂಗ
ನಿಮಗೆ ವಶವಲ್ಲ ನಮ್ಮ ಕೂಡಲ ಚೆನ್ನಸಂಗ ೪

ಶರಣ ಷಣ್ಮುಖ ಸತ್ಯ ಶಾಂತಶೀತಲಿಂಗ
ಪರಮಭಕ್ತರಿಗೊಲಿದು ಹರುಷವಾಗಿಹ ಲಿಂಗ
ಕರಿಯಬಸವನ ಪ್ರಾಣಲಿಂಗ
ನರರಿಗೆಡಿಸದಿಹ ಪರಮ ಗುರುಗೊಹೇಶಲಿಂಗ ೫

೨೫

ರಾಗ ॥ ನಾಟಿ

ಆದಿ ಅನಾದಿ ಅಪ್ರತಿಮ ಘನಗುರುಲಿಂಗ
ಈ ಧರೆಯನಾಳ್ವ ಇಪ್ಪತ್ತೊಂದುಯುಗದಿಂದ

ದೇವ ದೇಹೋದೇವ ತಾ ನಾದ
ರಾಜಬಂದನು ಧರೆಗೆ ಧರ್ಮವಸವಂತ ॥ ಪಲ್ಲ ॥

ಹದಿನೆಂಟುಯುಗದಿಂದ ಹದಗೊಳಿಸಿ ಗುರುರಾಯ
ಚದುರತನದಿಂದ ಕರಿಬಸವನೆಂದೆಂಬ
ಮದಕರಿಯುನೇರಿ ತುರ್ಯಾತೀತ ನಾನೆಂಬ
ಅರಸು ಬಂದನು ಧರೆಗೆ ಧರ್ಮವಸವಂತ
ಅದು ಕರುಣಾನಂದ ಶುಕ್ಲ ಸಂವತ್ಸರದಿ
ಬುಧವಾರ ಧ್ವಜವೇರಿ ಮದವಳಿಗನಾದ
ಹದಿನೇಳು ದಿನ ವಿವಹ ವಸವಂತ ತಿರುನಾಳು
ಇದು ಕಲಿಯುಗದ ಕಥೆಯು ಕುಂಭಿನಿಯ ಜಾತ್ರೆ
ಇಂದ್ರ ಅಗ್ನಿ ಯಮ ನೈಋುತ್ಯ ಲಲನೆಯರು
ಒಂದಾಗಿ ವರುಣ ವಾಯುವ್ಯ ಕುಬೇರ
ಇಂದುಮುಖಿ ಲಕ್ಷ್ಮಿಯು ಈಶಾನ್ಯರೊಡಗೂಡಿ
ಬಂದು ನಿಂದಳು ಬಸವರಾಜನಿದಿರಿನೊಳು ೧

ಇಂದಿಗೆಂಟಾಯಿತು ಶುಕ್ಲ ಸಂವತ್ಸರದಿ
ಮುಂಡೆಯಾಗಿದ್ದವಗೆ ಗಂಡ ನೀ
ಬಂದೆಯೆಂದು ಜಯಲಕ್ಷ್ಮಿಯು ಕೊಂಡಾಡಿ
ಬಸವ ನೀನೆಂದು ಕೂಡಿದಳು ಹರುಷದಲಿ
ನಲವಿಂದ ಭಾದ್ರಪದಮಾಸ
ಬಂದಿತೆಂದಧಿಪತಿಯು ದಂಡೇಶ
ಬಂದೆಯೆಂದು ಜಯಲಕ್ಷ್ಮಿಯು ದಂಡೇಶ
ಇನವಾರ ಚವುತಿಯು ಶುಕ್ಲ ಪಕ್ಷದಲಿ
ಧನುವ ಕರದೊಳು ಪಿಡಿದು
ದಿನವಂದು ವಸವಂತದಿನವು ಹದಿನೇಳು
ದಿನ ವಸಗೆ ವಸವಂತ
ಮನಸಿಜನ ಸುಟ್ಟು ಮನ್ಮಥನು ತಾ ತಾನಾಗಿ
ಕನಸು ಮನಸಿನೊಳು ಕಾಮಾತುರ್ಯನಾಗಿ
ದಿನಪತಿಯು ಷಡುದರುಶನಸ್ಥಾಪನಾಚಾರ್ಯನೆನಿಸಿ
ಕುಣಿಸಿದನು ಘನಲೀಲೆಯು ಬೀರಿ ೨

ಈಚಲವ ಬಿಡೆನೆಂಬ ಈಚಲೆಂಡವ ಕುಡಿದು
ಈಚಲವು ತಲೆಗೇರಿ ನೀಚಮಾನವರು
ಕೋತಿಯಂದದಿ ತಮ್ಮ ಹೇಸಿಕೆಗಳು ತಿಂದು
ಅಚಲಿತ ಬಸವನು ಜರಿದ ಕಾರಣವು

ಬಾಚಿಯಲಿ ಕಡಿದು ಪೂರ್ವಚಂದಿಗನು
ಪ್ರಾಚಿತವ ಮಾಡೆಂದು ಪಾಪ ಸಂಹಾರಿ
ಈ ಕಲಿಯುಗದ ಕಡೆಯು ಕುಂಭಿನಿಯು ಕುಂಭದೊಳು
ಅಚಲಿತ ಬಸವ ದಂಡೇಶನಾಡಿದನು ೩

ಅಷ್ಟದಿಕ್ಕಿನೊಳೆಲ್ಲ ಭಟ್ಟನಾಗಿಯೆ ಹೊಗಳಿ
ಭ್ರಷ್ಟಮನುಜರ ಕಯ್ಯ ಭ್ರಷ್ಟನೆನಿಸಿರ್ಪ
ನಷ್ಟನೆಲ್ಲವ ಸುಟ್ಟು ಪಟ್ಟದರಸೆಂದೆಂಬ
ಪಟ್ಟನಾಮವನಿಟ್ಟ ಕೊಟ್ಟುರೆಂಹ ಬಸವ
ಸೃಷ್ಟಿಯೊಳು ಹದಿನೆಂಟು ಸಮಯಾದಿಗಳು ತಮ್ಮ
ಇಷ್ಟವೆಲ್ಲವ ಸುಟ್ಟು ಪಟ್ಟದರಸೆಂದು
ಗಟ್ಟಿಸಿತು ಘನಲೀಲೆಯೆಂಬ ಸೂಚನೆಯ
ಬಿಲ್ಲೆತ್ತಿ ತೋರಿದೆನು ಬಿಲ್ಲಾಳು ನಾನೆಂದು ॥ ಆದಿ ॥ ೪

೨೩

ರಾಗ ॥ ಆಹಿರಿ

ಮಿಂಡಿಬಿಲ್ಲು ಪಿಡಿದು ಕರದೊಳಗೆ
ಮಿಂಟೆಯೊಡಗೂಡಿ ಎಸೆವುತ್ತ ರಾಜವೇಶಿಯರ
ಮಿಂಡಿಬಿಲ್ಲ ಪಿಡಿದು ಕರದೊಳಗೆ ॥ ಪಲ್ಲ ॥
ಆನಂದ ಸಂವತ್ಸರದ ಶುದ್ಧ ತದಿಗೆಯೊಳು
ಸೋಮವಾರದಲಿ ಉಷ ಶುದ್ಧ ಪೌರ್ಣಮಿಯಲ್ಲಿ
ಕಾಮನ್ನಹಬ್ಬವು ಬಂದಿತಿದೆ ಕೊ ವಿರಹ
ಕಾಮನಾದನು ಕಾವರಾಯ ವಸವಂತ ೧

ಏಳುನೂರೆಪ್ಪತ್ತು ಅಮರಗಣವೆಂದೆಂಬ
ಸೂಳೆಗನ್ನಡವನ್ನು ಸುಟ್ಟು ಭಸ್ಮವನಿಟ್ಟು
ಕಾಳಬಸವುಗನು ತಾನಾಗಿ
ಕಟ್ಟಾಳು ಕರುಣಾಕರ ದಯಾಳು ವಸವಂತ ೨

ಹಂಪೆ ವಿರೂಪಾಕ್ಷನೊಳು ಕೆಂಪಿನೊಡಕೆಯ
ಸುಟ್ಟು ಗೊಪ್ಪೆಯುಮೆಂದೆನಿಸಿ
ಕೆಂಪಿನ ಗಣೆಯು ವಸವಂತವೆಂದೆಂಬ ನಾಮವನು
ಇಟ್ಟು ಹಂಪೆಯೊಳಗಾಡಿದನು ಕೆಂಪಿನ ವಸವಂತ ೩

ವೀರಾಧಿವೀರನು ಅಸುರ ಸಂಹಾರನು
ನಾರಸಿಂಹನ ಶಿರಚ್ಛೇದನವತಾರ

ಬ್ರಹ್ಮಾದಿ ರುದ್ರರ ಮುಂಗನರಿದು
ಶರಭ ಮಾರಹರವೈರಿ ಕರಿವೀರವಸವಂತ ೪

ರಾಜಾಧಿರಾಜನು ರಾಜವಿಟರಾಜನು
ರಾಜರಾಜರಗಂಡ ಚೆಲುವ ಚೆನ್ನಿಗಬಸವ
ರಾಜಕುಮಾರರ ಮುಂಗನು ದೇವ
ರಾಜವಂುಖಿಯರ ಪ್ರಾಣರಾಜ ವಸವಂತ ೫

ಲಿಂಗವೆಂದೆಂಬ ವಿಂಟ್ಟೆಯ ಪಿಡಿದು
ಎಸೆವುತ್ತ ಮಂಗಳಾತ್ಮಕಲಿಂಗವಂ ತೋರಿ
ಮಹಿಪುರದಿ ಗಂಡುಂಗಲಿ ಲೀಲೆಯಾಡಿದನು
ಭಲರೆ ಗಂಭೀರ ಗರುವರಸು ಲಿಂಗ ವಸವಂತ ೬

ಎಸೆವುತ್ತ ಬರುತಿರಲು ಎಸಗಿ ಮಹಘನಲೀಲೆ
ಬಸವ ಬಂದನುಯೆಂದನುಭವದ ಭವಿಗಳು ತಾವೆ
ಉಸುರಿತ್ತು ವಸವಂತನೆಂದು
ಭಲರೆ ಮುಸುಕ ತೆರೆದನು ರಸಿಕ ಬಸವ ವಸವಂತ ೭

ವಿಶಾರಿದುದೆ ವಿಂಡಿಬಿಲ್ಲು ವಿಂಗೆ ಹಾದುದುದೆ ವಿಂಟ್ಟೆಯಂ
ತೋರಿದುದೆ ಎಸಕು ಗುರಿತಾಗಿದುದೆ ತಾನೆ ತಾನಾದುದುದೆ
ಪಿಂಡಾಂಡದೆಸುಗೆಯೆಸೆದು ತೋರ
ಬಂದಿಹೆ ಜಗವ ತೂರಿ ವಸವಂತ ೮

ಅಷ್ಟಮದ ಹಾರಿತ್ತು ಸಪ್ತವ್ಯಸನಗಳೆಲ್ಲ
ಸುಟ್ಟುರುಹಿ ಹೋಯಿತ್ತು
ಸತ್ವರಜತಮವೆಂಬ ಕತ್ತಲೆಯು ಪರಿದೋಡಿತಲ್ಲ
ಭಲರೆ ಅಷ್ಟದಿಕ್ಕಿನೊಳೆಲ್ಲ ಅಪ್ರತಿಮಲೀಲೆ ೯

## ೨೭

ರಾಗ ॥ ಗುಂಬ ಕಾಂಬೋಧಿ

ತೆರನ ಹೇಳುವೆ ನಮ್ಮ ತುರುಂಕ ಭಕ್ತರುಗಳ
ತುರಕ ತುರ್ಯಾತೀತ ತುಂಬಿದ ಶರಣರ
ತೆರನ ಹೇಳುವೆ ನಾನು ॥ ಪಲ್ಲ ॥

ತುಂಬಿ ತುಳುಂಕಿ ತುರ್ಯಾತೀತವೇರಿ ಬ್ರಹ್ಮಾಂಡದಿಂದತ್ತತ್ತ
ಬಯಲಾದ ತುರುಕರ ತೆರನ ಹೇಳುವೆ ನಾನು ೧

ಅಲ್ಲ ಖುದಾ ಅಲ್ಲ ಏಕೋದೇವನಲ್ಲದಿಲ್ಲಯೆಂಬರು
ನಮ್ಮ ಬಾಬಯ್ಯ ತುರುಕರ ತೆರನ ಹೇಳುವೆನು ನಾನು ೨

ಮೊಂಡಮುಕೊರಕರು ಸಂತೆಯೊಳೆ ದೇಗಲ್ಲರಂದದಿ
ತಿರುಗುವಯೆನ್ನು ತುರುಕರನ್ನು ತೆರನ ಹೇಳುವೆನು ನಾನು ೩

ನರನ ಬೇಡರು ನರಕಿಗಳನ್ನು ನೋಡರು ಶರಣನ
ಪಾದರಕ್ಷೆಯು ಹೊತ್ತ ತುರುಕರ ತೆರನ ಹೇಳುವೆನು ನಾನು ೪

ಮರವೆವ ಸುರೆಯುವ ಉಗಿದು ಚೆಲ್ಲಾಡುತ್ತ ಧರೆಯೊಳು
ಧರ್ಮವಾಚರಿಸುವ ತುರುಕರ ತೆರನ ಹೇಳುವೆ ನಾನು ೫

ನಾಹಂವೆಂಬುದೆ ನರಸಿಂಹಾವತಾರ
ಕೋಹಂಕೊಯ್ಸಿಬಿಟ್ಟರೆಮ್ಮ ತುರುಕರನ್ನು ತೆರನ ಹೇಳುವೆ ನಾನು ೬

ಲಜ್ಜೆ ನಾಚಿಕೆಯಿಲ್ಲ ಸಜ್ಜನತ್ವಗಳಿಲ್ಲ
ದುರ್ಜನ ದುರಹಂಕಾರಿ ತುರುಕರನು ತೆರನ ಹೇಳುವೆ ನಾನು ೭

ಬೇಕೆಂದೆನ್ನರು ಬೇಡವೆಂದೆನ್ನರು ಆಕಾರವು
ನೋಡರಾದಿ ತುರುಕರನ್ನು ತೆರನ ಹೇಳುವೆನು ನಾನು ೮

ಷಡುದರುಶನದೊಡೆಯನು ಸತ್ಯಷಣ್ಮುಖ
ಕಡೆಯೂಟಕೆ ತಂದ ಕರಿಯು ತುರುಕರನ್ನು ತೆರನ ಹೇಳುವೆ ನಾನು ೯

ಅವರೀಗ ಆದಿ ಅನಾದಿ ತುರುಕರೆಂದು
ಕರವೆತ್ತಿ ಸಾರಿದೆ ಗುರುಗೊಹೇಶ್ವರನಾಣೆ ತೆರನ ಹೇಳುವೆ ನಾನು ೧೦

೨೮

ರಾಗ ॥ ಶಂಕರಾಭರಣ

ನುಡಿದಂತೆ ನಡೆಯುಬಲ್ಲರು ನಮ್ಮ ಶರಣರು
ಜಡಜೀವಿಪಶುಗಳು ನುಡಿವರೆಮ್ಮವರ
ನುಡಿದಂತೆ ನಡೆಯುಬಲ್ಲರು ನಮ್ಮ ಶರಣರು ॥ ಪಲ್ಲ ॥

ತೊಟ್ಟಿಲೊಳಗೆ ಶಿಶುವಿರಿಸಿ ಜೋಜೋಯೆಂದು
ಅಕ್ಕರಿಂ ಹಾಡಿ ತೂಗಾಡಿಸುವವನು

ಭಕ್ತರ ಪ್ರಿಯ ಭಾಳಾಕ್ಷ ತಾನಾಡುವ
ಆ ಮುಕ್ತಿಯುಳ್ಳವರಿಗೆ ಮೂರು ಕಣ್ಣಿಹವು ೧

ರೂಪಿನೊಳಡಗಿ ಚಿದ್ರೂಪ ತಾನಾಗಿಹ
ರೂಪು ಚಿದ್ರೂಪು ನಿರಾಕಾರ ತಾನೆ
ಏಕೋಭರಿತನಾಗಿ ಸಾಕಾರವಡಗಿ
ನಿರಾಕಾರ ಶರಣರು ನಿಮ್ಮ ಹಳಿವರು ೨

ಕೂಳಿನ ಹಾರುವರಲ್ಲ ಕುರುಹ ತೋರುವರಲ್ಲ
ಸೂಳೆಯರಂತೆ ಶೃಂಗರಿಸುವರಲ್ಲ
ಆಳಿನ ಆಳಾಗಿ ಅಡಗಿಕೊಂಡಿಹರು
ಈ ಸೂಳೆಯರುಗಳ ಮೂಗರಿದು ಕೊಲುವರು ೩

ವೇಷಧಾರಿಗಳಾಗಿ ಹೇಸಿಕೆಗಳ ತಿಂದು
ಗಾಸಿಯಾಗುವರಲ್ಲ ಗಂಡನುಳ್ಳವರು
ಹೇಸಿಗಳೆನಿಸಿಕೊಂಡಿಹ ಎಮ್ಮ ಶರಣರು
ನಿರಾಕಾರ ಶರಣರು ನಿಮ್ಮ ಹಳಿವರು ೪

ಆಡಿಸಿದಂತೆ ಆಡುವ ಎಮ್ಮ ಶರಣರು
ಅನಾದಿ ಕೂಡಲಸಂಗಮೇಶನೊಳಿಹರು
ಮೂದೇವರೊಡೆಯನು ಮಾದಾರನೆಂಬವ
ಆದಿ ಆಧಾರ ನಮ್ಮಯ್ಯ ಚೆನ್ನಯ್ಯ ೫

೨೯

ರಾಗ ॥ ಆಹರಿ

ರುದ್ರಾಂಗುದುಂಗೆಯ ಪಿಡಿದ ಕುರುಹ ಪೇಳ್ವೆ
ಸಿದ್ಧಬಸವೇಶ್ವರನ ಮುದ್ದುಮುಖದವನು
ರುದ್ರಾಂಗುದುಂಗೆಯ ಪಿಡಿದ ಕುರುಹ ॥ ಪಲ್ಲ ॥

ಒಂದು ಪೆಟ್ಟಿನ ಕುರುಹು ಒಂಬತ್ತುನವಕೋಟಿ
ಸುಂದಣಿಪ ಭೂತಗಣಕವುತಣವ ಮಾಡಿಸುತ
ಸಂಧಿಸನಿಂದ ವೃಷಭೇಂದ್ರ ಅವನ
ಕಂದ ನಾನೆಂದು ಸಾರಿದೆನು ಧರೆಯೊಳಗೆ ೧

ಎರಡುಪೆಟ್ಟಿನ ಕುರುಹು ರಕ್ತಾಕ್ಷಿನಡುಮಧ್ಯ
ಶರಣ ಗುರುಬಸವೇಶನೊಡನೆ ರಣಭೂತಗಳು

ಧರಣಿಪತಿ ಬಂದೆಯಾಯೆಂದು ದಣಿದು ಕುಣಿದು
ಡರ್ರನೆ ತೇಗಿ ಮರುಳು ತಂಡಗಳು ೨

ಮೂರುಪೆಟ್ಟಿನ ಕುರುಹು ಮೂರಕ್ಕೆ ಸರಿ ಶರಭ
ವೀರ ಕುರುಬನು ನುಡಿದ ಮುನ್ನ ತಾಪಿಡಿದಿರ್ದ
ಹಾರುವನ ತಲೆಯೋಡು ತುಂಬಿ ತುಳುಕಿ
ಆಡಿಮುಗಿಯಿತು ಆದಿ ಸಂಗ ತಾ ನೋಡಿ ೩

ಬೊಬ್ಬೆಗಳ ಹೊಯ್ದು ಅಬ್ಬರಿಸಿ ಧರೆಯೊಳಗೆಲ್ಲ
ತಬ್ಬಿಬ್ಬಗೊಳಿಸುತ್ತ ನರಕಿಗಳ ತಮತಮಗೆ
ಯುದ್ಧವಿಕ್ಕಿದ ಆದಿರುದ್ರ ಕಡೆಯು
ಚಿದ್ರೂಪಜೂಟ ಇಷ್ಟಕರ ರಾಜ ೪

ಉರಿಲಿಂಗೋದ್ಭವವಿದೆಯೆಂದು ಸಾರಿದೆ ಗುರುವೆ
ಧರೆಯೊಳಗೆ ನೀನಿತ್ತ ಒಸಗೆ
ವಾಲೆಯು ಪೇಳ್ವೆ ಹೊಡೆದು ಕಡಿದರುಯೆನ್ನ ತಲೆಯು
ನೀನು ತಡೆದು ತಂದುದನರಿಯೊ ಮೃಡಸಂಗಮೇಶ ೫

೩೦

ಮದಕರಿಯು ಮದವೇರಿ ಬಂದಿದೆ
ತ್ರಿಜಗಕತಿ ಪೊಸತಾಗಿದೆ
ಕದುಬಿ ಬಲಸಹವಾಗಿ ನಿಂದಿದೆ
ಕದನಚವೃಪಟನೆನಿಸಿದೆ
ಮದನ ಕಾಲನ ತುಳಿದು ಕಲಿಯುಗ
ಕಡೆಯು ಕಾಶಿಯೆಂದೆನಿಸಿದೆ
ಇದೆ ಕುರುಹು ರುದ್ರವತಾರನು ವೀರಕರಿಬಸವಾರ್ಯನು ೧

ಕಾಲಕರ್ಮದಗಂಡ ಭೈರವ
ಕಾಲರುದ್ರವತಾರನು
ನೀಲಕಂಠನು ನೀಲಲೋಚನೆ
ಅರಸು ಬಸವ ಕುಮಾರನು
ಏಳುನೂರೆಪ್ಪತ್ತ್ಯೇಳರಯೇಳು
ವರುಷದ ವೇಳ್ಯವು ಕಾಳಬಸವೃಗನಾಗಿ
ಬಂದನು ಧಾಳಿ ಕರ್ಮದ ಮೇಲೆಯು ೨

ದಂಡಪಾಶವ ಪಿಡಿದು ಜಗದು
ದ್ದಂಡನೆನಿಸುವ ಲಂಡನು
ಚಂಡವಿಕ್ರಮ ಭವತಿಮಿರಮಾ
ರ್ತಾಂಡ ಸುಗುಣಕರಂಡನು
ದಂಡನಾಯಕ ಬಸವಗುರು ಕೋ
ದಂಡನಿತ್ಯಪ್ರಚಂಡನು
ನಂಡುಮಾಡಿದ ಪರಸಮಯ ಜಗ
ದ್ದಿಂಡು ದೈವದ ಗಂಡನು ೩

ನಿತ್ಯಯೇಕೋದೇವ ಎನಲಾ
ಮುಚ್ಚರಿಪ ಮಾಯೂಂಕುಶ
ಸತ್ತುಹುಟ್ಟುವ ಸಕಲ ಮನುಜರ
ನೆತ್ತಿಗೆತ್ತಿದ ಗರಗಸ
ಕತ್ತರಿಯು ಕಲಿಯುಗದ ಕರ್ಮವ
ಕತ್ತರಿಪ ಬಲುಚಕ್ರವು
ವಿಸ್ತರಿಪ ವಿಷಯಂಗಳೆಲ್ಲ
ಶಸ್ತ್ರ ಗುರು ಕರಿಬಸವನು ೪

ವಿಗಡವೇಷದ ವೀರ ಶರಭನು
ದುಗುಂಡನರಕಿಗಳೆದೆಯನು
ಬಗೆದ ರಕ್ತವ ಸುರಿದ ಜಾಣರ
ದೇವ ಜಂಗಮರಾಯನು
ತನ್ನ ಬಗೆಯ ತೋರದ ಭವದ ಭವಿಗಳಿಗೆ
ಗೊಗಡುದೋರಿದ ಮಹಿಮನು
ನಿಗಮಾತೀತಕೆ ನಿಲುಕದಿಹ
ಅಪ್ರತಿಮ ಘನಗುರುರಾಯನು ೫

ಅಜನು ರುದ್ರನು ಹರಿಯು ನರನೆಂದು
ತ್ರಿಜಗದೊಳು ಡಂಗುರವನು
ಗುರುವೆ ಒಬ್ಬನೆಯೆಂದು ಹೊಯ್ದನು
ಗಜದ ಚರ್ಮಾಂಬರನನು
ಭಜನೆಗಳ ಭಂಗಿಸುತ
ಬಾಹ್ಯಸ್ಥಲದ ಲಿಂಗವ ಹಳಿದೆನು
ಕುಜನ ದೈವದ ಗಂಡ
ಕುಟಿಲ ಜೈನ ಜಂಗಮ ಹಳಿದೆನು ೬

ಪ್ರಥಮಸಾಧಕದೋರಿ ಮರೆಸಿದ
ಪ್ರತಿಗೆ ಅಪ್ರತಿಮಾರ್ಯನಂ
ಸತಿಗೆ ಶಕ್ತಿಯ ಸಾಧಕಾಂಗದ
ಗತಿಯ ತೋರಿದ ಘನವನು
ಪ್ರಥಮಯಿದಿರಂ ಮರೆದು
ತಮ್ಮೊಳಗರಿದು ತಾನೇಯಾದನಂ
ಮಥನಿಸುವ ಮಾಯಾಮಲಂಗಳ
ಹೊಸೆದ ಹೊಸ ಬಸವೇಶನು ೭

ತ್ರಿಗುಣಗಳ ನೆರೆ ದಹಿಸಬೇಕೆಂ
ದಧಮಮನುಜನಂ ನುಡಿವನಂ
ತ್ರಿಗುಣಬಾಹ್ಯಸ್ಥಲದ ಮೂರನಂ
ಒಗದು ತನ್ನೊಳಗರಿದನು
ತ್ರಿಗುಣವಿಷ್ಟ ಪ್ರಾಣಭಾವದೊ
ಳಡಗಿದೊಮ್ಮನವಾದನಂ
ಸಗುಣ ನಿರ್ಗುಣ ಭರಿತ ಚಿನುಮಯ
ಗುರು ಕರಿಯಬಸವಾರ್ಯನಂ ೮

೩೧

ಸುವ್ವಿವಚನ

ಅಪ್ರತಿಮಶೂಲವಯೆತ್ತಿ ಭಿಕ್ಷಕೆಬಂದ
ಮತ್ತೆ ಮಾನವರಿಗುಳುಹಿಲ್ಲ ಅತ್ಯಂತ
ಸತ್ಯಭಕ್ತರಿಗೆ ಉಸುರಿದೆ ॥ ಸುವಬಿ ॥

ಏಳುನೂರೆಪ್ಪತು ಏಳಕೆ ತಾ ಬಂದ
ನಿಸ್ಸಾಳ ತಬಟ ಚೀರಿ ಗಿಡಿ ಬಿಡಿ ಹೊಯ್ಯುತ್ತ
ಆದಿಕಲ್ಯಾಣಕೆ ನಡೆತಂದ
ಆದಿಕಲ್ಯಾಣಕೆ ನಡೆತಂದ ಆ ಗುರುವ
ಕಾವವರಿಗರಿದು ಆಳವಲ್ಲ ೧

ಬ್ರಹ್ಮಾಂಡವೆಂದೆಂಬ ಬ್ರಹ್ಮಕಪ್ಪರವೆತ್ತಿ
ನಿರ್ಮಲದ ಶಕ್ತಿ ನಿಜಮುಕ್ತಿಯ ಕೇಳಮ್ಮ
ಧರ್ಮಸ್ವರೂಪ ದಯವಾದ
ಧರ್ಮಸ್ವರೂಪ ದಯವಾದ ಸುದ್ದಿಯ
ನಮ್ಮವರಿಗೊಮ್ಮೆ ಉಸುರಿದೆ ೨

ನಾನು ಕಂಡವಳಲ್ಲ ನಮ್ಮವರು ಹೇಳಿದರು
ನಾರಂದಪ್ರಿಯ ನಗುತೆಂದ
ನಾರಂದಪ್ರಿಯ ನಗುತ ಹೇಳಿದ ಬುದ್ಧಿಯಿದ
ಆಕ್ಯೆದು ಭಕ್ತರಿಗುಸುರಿದೆ
ಆಕ್ಯೆದು ಭಕ್ತರಿಗುಸುರಿದೆ ಈ ಕುರಿಗಳ
ಧಾರಿಣಿಯ ಹಬ್ಬಕ್ಕೆ ತರಿದರು ೩

ಏಕೋದೇವುಗನೆಂಬ ಬಿರಿದ ಕಾಲೊಳು ಕಟ್ಟಿ
ಕಾಕುಮಾನವರ ತುಳಿದರು
ಕಾಕುಮಾನವರ ತುಳಿಯದಿದ್ದರೆ ಆದಿ
ಏಕೋದೇವುಗನ ಮಗನಲ್ಲ
ಏಕೋದೇವುಗನ ಮಗನಲ್ಲ ಎಮ್ಮ ಶರಣರ
ಬಿರಿದಿನಾಟಕ್ಕೆ ಇದೆ ಕಡೆಯೆಂದೆ ೪

ಹೆಡತಲೆಯೊಳ್ನಾಲಿಗೆಯ ತೆಗೆವೆ ಬೆನ್ನಟ್ಟೆಯ
ಕಡುಪಾತಕರಿರ ಕಡೆಯಾಟ
ಕಡುಪಾತಕರಿರ ಕಡೆಯಾಟ[ದಿ]ಭಕ್ತ
ಮಡಿವಾಳಯ್ಯಗಳಮಗ ನಾನು
ಮಡಿವಾಳಯ್ಯಗಳಮಗ ತಂದ ಸುದ್ದಿಯ
ಸಡಗರವ ಕೇಳಿ ಶರಣರ ೫
ಶೂಲವ ಎತ್ತುತ್ತ
ಬಲಿಸುವೆ ಮತ್ತೆ ಹಿಮ್ಮಡವ ತೆಗೆಸುವೆ
ಮತ್ತೆ ಹಿಮ್ಮಡದ ನರವೆತ್ತಿ ಕೀಳುಗ
ಸತ್ಯವುಳ್ಳವರ ಹಳೆಯನು
ಸತ್ಯವುಳ್ಳವರ ಹಳೆಯ ಆದಿಶರಣರ
ತೊತ್ತು ತೊತ್ತಿನ ಮಗ ನಾನು ೬

ನಿಮ್ಮ ಪಾಡೇನೆಲವೊ ಕುನ್ನಿಮಾನವಗಳಿರ
ನಿಮ್ಮ ಕಂಡಗಳ ನಿಮಗಿಕ್ಕಿ ಕಚ್ಚಾಡಿಸುತ
ಬೆನ್ನ ಶೂಲವನೆತ್ತಿ ನಡೆದ
ಬೆನ್ನ ಶೂಲವನೆತ್ತಿ ನಡೆದ ಕಲ್ಯಾಣಕ್ಕೆ
ಚೆನ್ನಬಸವೇಶನರಮನೆ ೭

ಕಾವೇರಿಕಲ್ಯಾಣ ದೇವಸಭೆಯಾಯಿತ್ತು
ದೇವದೇವೇಶ ಉಘೆಯೆಂದು ಪಟ್ಟ ಕಟ್ಟಿದರು
ಆದಿಬಸವೇಶ ಗುರುಲಿಂಗ

ಆದಿಬಸವೇಶ ಗುರುಲಿಂಗ ಜಂಗಮವು
ಕೈಲಾಸಯಿಂದೆಯೆಂದೆ ೮

ಹರಿಗೆ ಹತ್ತವತಾರ ಮುಗಿಯಿತ್ತು ಇಂದಿಗೆ
ಹರನು ತಾನಾದ ಕಥೆಗೇಳಿ
ಹರನು ತಾನಾದ ಕಥೆಗೇಳಿ
ಹರಿಯಲ್ಲದಿಲ್ಲಧರೆಯೊಳು ಡಂಗುರವ
ಕರವೆತ್ತಿ ಹೊಯ್ದು ಕಥೆಗೇಳಿ ೯

ಹರಿಯು ಹತ್ತವತಾರದಲಿ ಸತ್ತು ಹುಟ್ಟಿದನೆಂದು
ನಿತ್ಯಪದವಿತ್ತು ನಿಜವಿತ್ತು
ಆ ವಿಟವಿಷ್ಣು ಬಸವೇಶ ವಿರೂಪಾಕ್ಷ
ವಿಷ್ಣು ಬಸವೇಶ ವಿರೂಪಾಕ್ಷ ವೀರವಸವಂತ
ಕರ್ತೃತಾನಾದ ಕಡೆಯಾಟ ೧೦

೩೨

ರಾಗ ॥ ಮಡಿಧನ್ಯಾಸಿ

ಸತ್ತಿತೆನ್ನಯ ಅರುಮರವೆಯು
ಶಿಶುವರ್ತಿಯಿಂದಲಿ ಬೇವ್ವದ ಕಂಡೆ
ಸತ್ತಿತೆನ್ನಯ ಅರುಮರವೆಯು ॥ ಪಲ್ಲ ॥

ಮುಂದುಗಾಣದ ಅಂಧಕ ಶಿಶುವು ಎನ್ನ
ಹಂದಿಯಂದದಲಿ ಕಾಡುವ ಶಿಶುವು
ಕಂದನಾಗಿ ಕರ್ಮದ ಶಿಶುವು
ಸಪ್ತವೆಸನಗಳಾಗಿಹ ಶಿಶುವು
ಕಪಿಯಂದದಿ ನೆಗೆದಾಡುವ ಶಿಶುವು ೧

ಹತ್ತು ಭವಕೆ ಹರಿವ ಶಿಶುವು
ಎಂಟು ಮುಸ್ತಿಮದ್ದಾನೆಯಾಗಿಹ ಶಿಶುವು
ಸಪ್ತವೆಸನಗಳಾಗಿಹ ಶಿಶುವು
ಸತ್ವ ರಜ ತಮ ಗುಣ ಶಿಶುವು ೨

ಆ ಶಿಶುವಿನ ಮೋಹಕ್ಕೆ ಸಿಕ್ಕಿ ಮರುಳಾಗಿ
ಅಸಮಾಕ್ಷ ಅಂತರಾತ್ಮಕನರಿಯೆ
ಶಿಶುವ ಭಸ್ಮವ ಮಾಡಿ ಭಸಿತಲೇಪವ ಮಾಡಿ
ಅಸಮಾಕ್ಷ ಅಂತರಾತ್ಮಕನಾದೆ
ಸತ್ತಿತೆನ್ನಯ ಅರುಮರವೆಯು ೩

೩೩

ರಾಗ ॥ ಸೌರಾಷ್ಟ್ರ

ಕಟ್ಟಿಗೆನ್ನ ಪಿಡಿದುದೇತಕೊ ಅಜಾತಸಂಗ
ಕಟ್ಟಿಗೆನ್ನ ಪಿಡಿದುದೇತಕೊ ಗುರುವೆಯಿವರ
ತೊಟ್ಟಕಿತ್ತು ಮೆಟ್ಟಿ ನಾಟ್ಯವನಾಡಬೇಕು
ಕಟ್ಟಿಗೆನ್ನ ಪಿಡಿದುದೇತಕೊ ॥ ಪಲ್ಲ ॥

ಶರಣರುಗಳ ತಿಂತಿಣಿಗಳ
ಹರುಷದಿಂದ ನೋಡಬೇಕು
ಗುರುವೆ ನೀವು ಹಾಸ್ಯದಲ್ಲಿ ಇದ್ದ
ಪರಿಯು ತೋರುತೀಗ
ನರಕಿಗಳನು ಇರಿದು ಕೊಲ್ಲುವ
ಕರುಳ ತೆಗೆದು ಸುಮುಮಾಲೆ ಹಾಕಿಕೊಂಬುವ
ಶಿರವನರಿದು ಹರುಷದಿಂದ ಚೆಂಡನಾಡುತ ೧

ಭಕ್ತರುಗಳ ಮೊತ್ತವನ್ನು
ಸುತ್ತುವರಿದು ನೋಡಬೇಕು
ಸತ್ಯವಂತ ಬಸವರಾಜ
ಚಿಕ್ಕಬಸವನಾಗಿ ತಾನೆ
ಮರ್ತ್ಯದೊಳಗೆ ನೀನೆಯೆನಿಸುತ
ನಿಂದಕರ ಒತ್ತಿಹಿಡಿ ಹಲ್ಲ ಕೀಳುತ
ನಾಲಿಗೆಗಳ ಕಿತ್ತು ಕಿತ್ತು ಬಿಸುಟಾಡುತ ೨

ಕೋಳುಹೋಗದೊಂದು ಅರುವ
ತಾಳಿಯೆನ್ನೊಳಿಂಬಿಟ್ಟು
ತಾಳಲಾರೆಯೆನ್ನಯ ಪ್ರಿಯ
ಬಹಳ ದಿವಸವಾಯಿತೇಳು
ಕೋಲಾಹಳವನ್ನು ಮಾಡುತ ನಿಂದಕರ
ಸೀಳಿ ಸೀಳಿ ಹಲ್ಲು ಕೀಳುತ
ಕಡೆಯಾಟ ವೀರವಸಂತವಾಡುವ
ಅಜಾತಸಂಗ ಕಟ್ಟಿಗೆನ್ನ ಪಿಡಿದುದೇತಕೊ ೩

೩೪

ರಾಗ ॥ ತೆಲುಗ ಕಾಂಬೋಧಿ

ಧಾಳಿ ಬಂದುಂದ ಕಂಡು ಜನ ಬೆದರಿದ ಸುದ್ದಿ
ಹೇಳುವರಳವಲ್ಲ ಕೇಳಿ
ಕಾಯುಕಂಬಳಿ ಹೊದ್ದು ಗೊಹೇಶನೆಂಬ ಗೊಲ್ಲ
ಬಾಳೆಂದು ಕರೆಯೆ ತಾವರಿಯೊ ॥ ಪಲ್ಲ ॥

ಮೂರು ನಾಲಿಗೆ ಬಾರುಕೋಲ ಪಿಡಿದುಕೊಂಡು
ಮೂರು ಲೋಕವು ಸೂರೆಯೆಂದು
ಮೂರು ಆರನೆ ಮೀರಿ ಸಾರಿದೆ ಧರೆಯೊಳು
ಪಾರಿಯ ಕರಿಯುವನೆಂದು ೧

ಭಂಡಾರವ ಕಾಯ್ದಿರ್ಪ ಬಾಗಿಲಗೊಲ್ಲ
ನೆಂಬ ಪೆಸರು ಎಮ್ಮಾವರ
ತೊಂಡರ ತೊಂಡ ಪ್ರಚಂಡ ಬಸವನೆಂದು
ಡಂಗುರವ ಸಾರಿ ನಾನಿಂದು ೨

ಹಿಂಡ ಕಾವೆನು ಹಿಂಡುದೈವದ
ಗಂಡನೆಂದೆಂಬ ಬಿರಿದುಯೆನಗುಂಟು
ಹಿಂಡುಗಳನು ಹೊಡೆತಂದು ನಮ್ಮಯ್ಯ ಮರುಳು
ತಂಡಗಳಿಗೆ ಉಣಿಸಿದನು ೩

ಬ್ರಹ್ಮಾಂಡವ ಸುತ್ತ ಬಳಸಿ ದೊಡ್ಡಿಯ ಕಟ್ಟಿ
ಕರ್ಮದ ಪಶುಗಳ ಕೂಡಿ
ನಮ್ಮಯ್ಯ ಗುರು ಗೊಹೇಶ್ವರ ತನ್ನ ಕೆಯ್ಯೊಳು
ಚೆನ್ನಯ್ಯನೆಂಬ ಕೊಳಲ್ಪಿಡಿದು ೪

ಉನ್ನಂತ ಉರಿಲಿಂಗ ಮಡಿವಳಯ್ಯಗಳೆಂಬ
ತನ್ನ ಹಸ್ತದಿ ರುಡ್ಡು ಗುಂದಿಗೆ
ತನ್ನ ಪಾದದಿ ಅಳವಟ್ಟಿಹ ಕರಿಯುಟ್ಟೆ
ನಮ್ಮಯ್ಯ ವೆಂಟ್ಟಿ ಕಾಯ್ದಿರ್ದ ೫

ಹುಸಿ ಹುಲ್ಲ ಹುಟ್ಟಿಸಿ ಪಶುಗಳ ಮೇಯಿಸಿ
ತೃಷೆಯಾಗಿ ನಿಷ್ಠುರ ನೀರ
ಪಶುಗಳಿಗೆರೆದುಪಚರಿಸಿ ನಮ್ಮಯ್ಯನು
ವಸುಧೆಯೊಳು ಕಾಯುತ್ತಿ ಕೊಂಡಿರ್ದ

4

ಪಶುಗಳೆಲ್ಲವು ಬೆದರಿ ದೆಸೆಯೆಂಟು ದಿಕ್ಕಿಲಿ
ವಶವಾದೊ ಹುಲಿ ನರಿಗಳಿಗೆ
ಅಸಮಭಕ್ತನು ಸಿದ್ಧಬಸವನೆಂಬ ಗೂಳಿ
ವಸುಧೆಯೊಳೊಂದೆ ತಾನಿಂದು ೬

ಗೂಳಿಗುಮ್ಮಳಪುರ ಧಾಳಿಯೆ ಧರ್ಮವೆಂದು
ಹೇಳಿದ ಗುರುಗೊಹೇಶ್ವರನು
ಕಾಳಬಸವನೊಳು ಕೂಡಿ ನಮ್ಮಯ್ಯನು
ಧಾಳಿ ಮಾಡಿದ ಧರೆಯೊಳಗೆ ೭

ಜಯು ಜಯು ಸಂಗಯ್ಯ ಬಸವದಂಡಾಧೀಶ
ಜಯು ಜಯು ಷಣ್ಮುಖ ನೀನೆ
ಜಯು ಜಗದಾರಾಧ್ಯನೆ ಜಯು ಸಿದ್ಧಬಸವ
ಜಯು ಜಯುವೆಂದಿತಾ ಗೂಳಿ ೮

ಗೂಳಿಗುಮ್ಮಳಪುರ ಧಾಳಿಯೆ ಧರ್ಮವೆಂದು
ಹೇಳಿದ ಗುರುಗೊಹೇಶ್ವರನು
ಕಾಳಬಸವನೊಳು ಕೂಡಿ ಸಂಗಯ್ಯನು
ಧಾಳಿ ಮಾಡಿದ ಧರೆಯೊಳಗೆ ೯

೩೫

ರಾಗ ॥ ಆಹರಿ

ಇದು ಕಡೆಯ ಕಾರ್ತಿಕವೆಂದು ನಿಂದ ಕಡೆಯು
ಕುಂಭದ ಕುಂಭಿನಿಯ ಜಾತ್ರೆಯೆಂದು
ಇದು ಕಡೆಯ ಕಾರ್ತಿಕವೆಂದು ॥ ಪಲ್ಲ

ಮೊದಲ ತಿರುನಾಳುತ್ತರದಲಿ ಬಂಡಿಯು ಕಟ್ಟಿ
ಕದನವು ಪುಟ್ಟಿ ದಕ್ಷಿಣ ಪೂರ್ವ ಪಶ್ಚಿಮದ ನಡು
ಮಧ್ಯ ಮಣಿಖಚಿತ ಪೀಠದೊಳಗೆ
ಸದಮಳಾತ್ಮಕ ಸಿದ್ಧಬಸವಚೆನ್ನಿಗನು ೧

ಎರಡನೆಯು ತಿರುನಾಳು ಗುರುಸಿದ್ಧಬಸವೇಶ
ಬುರುಡೆಗಳನುರುಳಿಸಿದ ಪರಿಯು ನಾನೇನೆಂಬೆ
ಅರಿತಿಮಿರಮಾರ್ತಾಂಡ ಕರಿಯುಬಸವ ಮದ
ನಾರಿ ಮಾಯಾಕೋಲಾಹಳ ಚೆನ್ನಿಗನು ೨

ಮೂರನೆಯು ತಿರುನಾಳು ಮುನಿಜನಂಗಳ ಕೂಡಿ
ಧಾತುಣೆಯು ನರಕಿಗಳು ದಂಡನಾಯಕನು

ದಾರುಂದರುಶನವು ಹದಿನೆಂಟುಸಮಯಾದಿಗಳು
ತಮ್ಮ ತಮ್ಮಿಷ್ಟಗಳ ಸುಟ್ಟು ೩

ಧ್ವಜವೇರಿ ಶೂಲದೊಳು ಹದನಾಗಿ ದೂತದೊಳು
ಒದೆದು ಪ್ರಜವು ನೃತ್ಯ ಸದದು ಅಂಗಿರದೊಳು
ಇದೆಕೊ ಇದೆಯೆಂದು ಶ್ರೀಮುಖದಿ....
. . . . . . . . , . , . . . . . . . . . . ೪

ನಾಲ್ಕನೆಯ ತಿರುನಾಳು ಲೋಕಾದಿ ಲೋಕಂಗ
ಳೇಕವಂ ಮಾಡೀಗ ನಾಲ್ಕೆಂಟು ದಿಕ್ಕಿನೊಳು
ಈ ಕಲಿಯುಗವನೇರಿದು ನಿಂದು ನರರ
ಕಾಲ್ಕಯ್ಯ ಕಿವಿ ಮೂಗ ನಾಲಿಗೆಯ ಕೊಯಿದು
ಧ್ವಜವೇರಿ ಶೂಲದೊಳು ಹದನಾಗಿ ಪ್ರಜೆಉತ್ಪತ್ಯ ಸದದು
ಅಂಗಿರದೊಳು ಇದೆಕೊ ಇದೆಯೆಂದು ಶ್ರೀಮುಖದಿ
ಭಲರೆ ಮದನಾರಿ ವೀರವಸವಂತ ಜಯುವೆಂದು ೫

೩೩

ರಾಗ ॥ ಶಂಕರಾಭರಣ

ಏಕೋದೇವದೇವ ದೇಹಿಕ ಭಕ್ತ ತಾನಾದ
ವೇಷಧಾರಿಗಕ್ಕೆ ಮರಣವಂತಹರೆ
ಏಕೋದೇವದೇವ ದೇಹಿಕ ಭಕ್ತ ತಾನಾದ ॥ ಪಲ್ಲ ॥

ಅಂಗದ ಮೇಲೆ ಭಸಿತ ರುದ್ರಾಕ್ಷೆಯಿಟ್ಟು
ಹಂದಿಗಳಂದದಿ ತಿರುಗುತ್ತಲಿಹರು
ಅಂಗದೊಳಗೆ ಗುರುಲಿಂಗವ ಧರಿಸಿಹ
ಸಂಗನ ಶರಣರಿಗೆ ಸರಿಬಾಹರೆಲವೊ ೧

ಜಡರುಗಳೆಲ್ಲ ಜಂಗಮವೆಂದೆಂಬರು ತಾವು
ಒಡೆಯನ ಮರದು ತಮ್ಮೊಡಲ ಹೊರವರು
ಮೃಡಸಂಗಮೇಶ್ವರಲಿಂಗ ಬಸವ
ನಮ್ಮ ಶರಣಂಗೆ ಸರಿಬಹರೆಲೊ ಪಾಪಿಗಳಿರ ೨

ಬ್ರಾಹ್ಮಣನಾವನೆಲವೊ ಭ್ರಷ್ಟರುಗಳಿರ
ಬ್ರಾಹ್ಮಣ ಪರಬ್ರಹ್ಮ ಪರಮಾತ್ಮ ತಾನೆ
ದೇವನ ಶರಣರಲ್ಲದೆ ಮಿಕ್ಕಿನ ಹರಿಹರಾಯೆಂದು
ಫೊಯಿದೆ ಡಂಗುರವ ಧರೆಯೊಳು ೩

ಕಾಯದೊಳಗೆ ಗುರು ಲಿಂಗ ಜಂಗಮವಿರ್ದು
ಭಾವಿಸಲರಿಯದ ಭವಿಗಳು ನೀವು
ಕೇಳಿರೆಲವೊ ಕಾಯ ಪ್ರಾಣ ನಮ್ಮದುಯೆಂಬ
ನಾಯಕ ನರಕದೊಳಿಪ ಪಾಪಿಗಳಿರ ೪

ತನ್ನೊಳು ಗುರು ಲಿಂಗ ಜಂಗಮಪಾದೋದಕ
ತನ್ನೊಳು ಪ್ರಸಾದವಿದ್ದುದ ಕಂಡು
ತನ್ನ ತಾ ತಿಳಿದು ನೋಡಿದ ನಮ್ಮ ಶರಣರು
ಚೆನ್ನ ಕೂಡಲಸಂಗಮೇಶನೊಳಿಪರು ೫

೩೭

ರಾಗ ॥ ಕೇತಾರಗೌಳ

ವೀರಶೈವಾಗಮವನಾರು ತಿಳಿಯರು ನಮ್ಮ
ವೀರಮಡಿವಳಲಿಂಗದೊಳಗಾದುದ ॥ ಪಲ್ಲ ॥

ಗುರುಶಿಷ್ಯ ಗುರುಭಕ್ತ
ಗುರುವು ಸತಿಯು ಪತಿಯೆಂದು
ಶರಣರಿಗೆ ಲೆಂಕ ಸಾರಿದ ಡಂಗುರವ
ಗುರುಲಿಂಗ ಜಂಗಮವೆ
ಗುರುಗೊಹೇಶ್ವರನೆಂದು
ಕರಿಯಬಸವನು ಪೇಳ್ದ ಕರುಣದಿಂದ ೧

ವಿಪರೀತಮಹಾಮಹಿಮ
ಆ ಪರಮಾತ್ಮಲಿಂಗದೊಳು
ಸಕರವಡಗಿದ ಶರಣಲಿಂಗೈಕ್ಯನು
ಮುಕುರ ಮೂವತ್ತಾರು ಕೋಟಿಗೊಬ್ಬನೆಯೆಂದು
ವಿಪರೀತ ಕರಿಯಬಸವ ಸಾರ ಒಂದ ೨

ಆತನೊಬ್ಬನೆ ನಿತ್ಯ ಪೇತುದ್ಯೈವಗಳೆಲ್ಲ
ಹೇತ ಹೇಲಿನ ಸಮನಿದೆಂದು ಕಂಡೆ
ಪೇತು ಮಾನವರು ಕಾಣರು ಕರಿಯ ಬಸವ
ಈತ ವಿಪರೀತ ಮಹಿಮ ತಾನೆಂಬುದ ೩

ಒಳಹೊರಗು ತಾನಾಗಿ ಒಲುಮೆ ಅರಿಯದ
ನಾಯಿಗಳಿಗುಳಿಸುತ ಒಂದ ಬೆಡಗು ಚಂದ
ಕಳೆದೋರಿ ಕರುಣರಸವಂ ಇತ್ತು ಭಕ್ತರನು
ತಿಳುಹಿ ಬೆರಸುವ ಮುದ್ದು ಕರಿಯ ಬಸವ ೪

ಕರಿಕರಿದುಂ ಕಾಣಬಾರದುಂದೆ ಕರಿದಾಗಿಹುದು
ಕರಿದು ಬಿಳಿಯದೆಂಬುವನು ಅರಿಯರಲವೊ
ಮರುಳಾವೇಶದಲಿ ಮೈಮರೆದು ಆಡುವ ಸಿದ್ಧ
ಕರಿಯುಬಸವನ ಕಾಣಬಾರದಿಹುದು ೫

ಕಾಳುಕೋಟ್ವಿಷವ ಕಂಠದಿ ತಾಳ್ದ ನಂಜುವಿಗೆ
ಕಾಳುರಗನು ಕಚ್ಚಿ ವಿಷ ಉಂಟೇನೊ
ಕಾಳುರಗನು ಸೋಲೆಗಳಿದು ಸೊಯುವಾದಂತೆ
ಕಾಳಬಸವನ ನೋಡೆ ಕರ್ಮಹರವು ೬

ವಿವರಿಸುವರಳವಲ್ಲ ಪರಮಪಾವನ ಬಲ್ಲ
ಪಿರಿದಪ್ಪ ರಸದಾಳಿಕಬ್ಬ ಸವಿದು
ಹಿರಿದಹ ಪಾಲು ಸಕ್ಕರೆ ಜೇನನುಂಡಂತೆ
ಕರಿಯುಬಸವನ ಇರವು ಪರೀಕ್ಷಿಸುವವಗೆ ೭

ಆಣಿಕಾರನೆ ಬಲ್ಲ ಮಾಣಿಕವಿದೆಂಬುವನು
ಕಾಣಬಾರದು ಕರ್ಮಿಗಳಿಗೆ ನೋಡ
ಜಾಣಗುರು ಕರಿಯುಬಸವೇಶನಾಡುವ ಬೆಡಗು
ವಾರಗಳಿಗೆ ಕಾಣಬಾರದಿಹುದು ೮

ಆರುದರುಶನಕೊಡೆಯ ಅಧಿಕ ಚೆನ್ನಬಸವಣ್ಣ
ಆರುದರುಶನದ ತಾನಾವುದೆಲವೊ
ಆರುಸ್ಥಲವಂ ಮೀರಿದಾಚಾರ್ಯ ಅನುಮಿಷನ
ಕಾರುಣ್ಯ ಕರಜಾತ ಕರಿಯುಬಸವ ೯

ನಾರಾಯಣನೆ ಜೋಗಿ ಬ್ರಹ್ಮಜಂಗಮವಾಗಿ
ರುದ್ರನೆ ಶ್ರವಣನಾಗಿರ್ದನಾಗಿ ಸನ್ಯಾಸಿ ಈಶ್ವರ
ಸದಾಶಿವ ಕಾಳಾಮುಖಿಯು ಪರಮೇಶ್ವರನೆ
ಪಶುಪತಿಯಾಗಿರ್ದ ಇವರಾರುಮಂದಿ ಭವಕಂಜಿ
ಭಜಿಸಲು ಚರಮಗುರು ಗೊಹೇಶ್ವರಲಿಂಗ ತೋರಲಿಲ್ಲ ೧೦

ಅಜ ಹರಿಯು ರುದ್ರನೀಶ್ವರ ಸದಾಶಿವ
ಮೊದಲು ಪರಮೇಶ್ವರಗೆ ಸಾಧ್ಯವಾದುದಿಲ್ಲ
ನಿರುಪಮ ನಿರಾಳ ನಿಷ್ಪತಿ ನಿರಂಜನ
ನಮ್ಮ ಗುರುಗೊಹೇಶ್ವರ ಕರಿಯುಬಸವನಾದ ೧೧

೩೮

ರಾಗ ॥ ಆಹರಿ

ಕುರುಬ ದೊಣ್ಣೆಯ ಪಿಡಿದುಕೊಂಡು ಬಂದ
ಕರಿವೀರವಸವಂತ ಗುರುಸಿದ್ಧಬಸವ
ಕುರುಬ ದೊಣ್ಣೆಯ ಪಿಡಿದು ಕೊಂಡು ॥ ಪಲ್ಲ ॥

ಭಕ್ತದೇಹಿಕನಾಗಿ ಭವವ ತುಳಿದವನಾಗಿ
ಸತ್ಯವಶಾತ್ಮಕೆಗೂಡಿ ಸಹಸ ಷಣ್ಮುಖನಾಗಿ
ಚಿತ್ತಯೇಕಸ್ಥಲದಿ ನಿಂದು ಬಂದ ಕರ್ತೃ ಕರಿ ಕರಿದಾಗಿ
ಕಾಣು . . . . . . . . ೧

ಲಿಂಗವೆಂದೆಂಬ ದೊಣ್ಣೆಯ ಪಿಡಿದು ಕರದೊಳಗೆ
ಭಂಗ ಭವಿ ಭ್ರಮಿತನೆಂದೆಂಬ ಮಡಕೆಯನೊಡೆದು
ಸಂಗ್ರಾಮವೀರ ಸಾಹಸಿಯು ಬಂದ
ಚಂದ್ರಮತಿಯೊಡಗೂಡಿ ಚಂದ್ರಶೇಖರನು ೨

ಉಗ್ರ ಗಡಿಗೆಯ ಪಿಡಿದು ರುದ್ರ ಸಂಹಾರನು
ವ್ಯಾಘ್ರಬೇಂಟೆಯನಾಡಿ ಶೀಘ್ರವಾಯಿತು ಲೀಲೆ
ಜಾಗ್ರ ಸ್ವಪ್ನವಸ್ಥೆಗಳನು ಹೊಯಿದು
ಉಗ್ರ ಗಡಿಗೆಯ ಹಂಬಲಿಪ ಅಂಬಲಿಯನು ೩

ಅಂಬಲಿಯ ಸವಿದಲ್ಲ ಕುಂಭಿನಿಯ ನಾಯಿಗಳು
ಹಂಬಲಿಸಿ ಕಳವಳಿಸಿ ಲಿಂಗಬಸವಾಯೆಂದು
ಅಂಗದಾಸೆಯ ಮರೆದು ತಾವೆ ತಮ್ಮ
ಮುಂಗೈ ಕಿವಿ ಮೂಗ ಕಾಲಖಂಡಿಸಿದ ೪

ಕಡೆಯಮಹರ್ನಾಮಕ್ಕೆ ಹೊಡೆದು ತಂದೆನು ಕುರಿಯ
ಕಡಿದು ಖಂಡಗಳ ಉಣಬಡಿಸ ಬಂದೆನು ನಾನು
ಕಡೆಯ ಕಾರ್ತಿಕವಿದೆಂದು ನಿಂದು
ಕಡೆಯ ದೀಪಾಳಿಗೆಯ ಶುದ್ಧ ಪೌರ್ಣಮಿಯು ೫

ಆರುದರುಶನ ಒಂದುಗೂಡಿ ಈ ಭಾಂಡದೊಳು
ಬೇರುಂಟೆ ಮತ್ತೊಂದ ಅರಸಲೇತಕೆಯೆಂದು
ತೋರಿ ಒಮ್ಮನದ ಸಂತಸವ
ಬೀರಿ ರಾಯ ಮಾಡಿದ ಕಲಸುಮೇಲೋಗರವನು ೬

ಉಣಬಡಿಸಿ ಭೂತಗಣತತಿಗೆ ವೀಳ್ಯವನಿತ್ತು
ದಣಿದು ಡಬ್ಬನೆ ತೇಗಿ ರಣಭೂತಗಳು ತಾವೆ
. . . ಡ . . . ರಾಯಕ ಚಾಂಗು . . . ಭಲರೆಯೆಂದು
ಬ್ರಹ್ಮಕಪಾಲವು ತುಂಬಿ ತುಳುಕಿಯಾಡಿದನು ೭

೩೯

ರಾಗ ॥ ಬೌಳಿ

ಕುರುಬ ದೊಣ್ಣೆಯ ಹಿಡಿದ ಕುರುಹ ಪೇಳುವೆ ನಾನು
ಮರೆವೆಂಬ ಮಬ್ಬು ಮುಸುಕಿತು ಕಾಣಿರೊ
ಅರುವ ತೋರುವ ನಮ್ಮ ಆದಿಬೀರಯ್ಯನನು
ಚರಣವನು ಭಜಿಸಿ ಮುಕ್ತಿಯ ಪಡೆಯಿರೊ ॥ ಪಲ್ಲ ॥

ಕುಹಕವೆಂದೆಂಬ ಕುರಿಗಳ ತಡೆದು ಮೇಯಿಸುತ
ಅರಸಿ ಹಬ್ಬಕ್ಕೆ ತಂದ ಆ ಕುರುಬನು
ಇವರರಿದರಿದು ಕೊಲ್ಲುತಿಹ ಆ ಸಮಯವನು ಕಂಡು
ಧರೆಗೆ ಸಾರುತ ಬಂದೆ ಕುರುಬನಾಳಾಗಿ ೧

ಚೌಡಿ ಚಾಮುಂಡಿ ಮಾರಿಯು ಮಸಣಿ ಯಕನಾತಿ
ದುರಿತಹರದೇವಿಯರೆಲ್ಲ ಕೂಡಿ
ಧರೆಗಿಳಿದು [ಹಬ್ಬ]ವನು ಮಾಡುತಿಹ ಸಂಭ್ರಮದ
ಆ ಕುರುಹ ಪೇಳುತ ಬಂದೆ ಕುರುಬನಾಳಾಗಿ ೨

ನಮ್ಮ ಗುರು ಕುರುಬ ನಮ್ಮ ಕುಲದೈವ ಬೀರಯ್ಯ
ಇನ್ನೊಂದು ಸುದ್ದಿಯನು ಪೇಳುತಿಹನು
ಷಣ್ಮುಖನು ಚನ್ನಬಸವೇಶನವರಾಳಾಗಿ
ಮಹದಾರ ಚನ್ನಯ್ಯ ಬಂದ ಅರುಹಿನ ಕುರುಹಿದೆ ೩

೪೦

ರಾಗ ॥ ಸೌರಾಷ್ಟ್ರಕ

ಮಲೆಯಾಳದ ಶಾಸ್ತ್ರೀಕನು ಮರ್ತ್ಯದೊಳಿಳಿದು ಬಂದ
ಬಂದು ಬುಡುಬುಡುಕೆಯ ಹಿಡಿದು
ತಿಪ್ಪೆಯೊಳು ನುಡಿದನೊಂದ
ಕೊಳಗವ ಹಿಡಿದು ಭಕ್ತಿಯ ಬೆಳೆ ಅಳೆವುತ
ಬಂದನಮ್ಮ ನಿಂದು ನುಡಿದನು
ಶಾಸ್ತ್ರೀಕ ಶರಣರ ಮಗ ಚೆನ್ನಬಸವ ನಮ್ಮ ॥ ಪಲ್ಲ ॥

ಕರ್ಮದ ಬೆಟ್ಟದ ಹೊಟ್ಟಿನ ರಾಶ್ಯವ ಸುಟ್ಟನಲ್ಲ
ನಮ್ಮ ನಿರ್ಮಲಗೊಹೇಶನೆಂಬ ಗೋಣಿಯು ತುಂಬಿದನಲ್ಲ
ಧರ್ಮಸ್ವರೂಪ ದಂಡೇಶನೆಂಬೆತ್ತಿನೊಳಿತ್ತನಲ್ಲ
ಆದಿವರ್ಮವ ನೋಡುತ ದೇವದೇಹಿಕ ಮೋರ್ತವಾದನಲ್ಲ ೧

ಬರಿಯುಬೊಮ್ಮದ ಮಾತ ನುಡಿವ ಭ್ರಷ್ಟರಿಗಿದು ಬಾಯಿಬೀಗ
ನರಗುರಿಗಳಿಗೆದೆಗೊಂತ ನಾರಸಿಂಹವತಾರವಳಿದರೀಗ
ಕಾವೇರಿಯೊಳು ನರಬೇಂಟೆಯನಾಡಿದ ಕುರುವಿದ್ದೀಗ
ಅಂದು ವೀರಮಡಿವಳಯ್ಯ ಕಲ್ಯಾಣದೊಳು ಕೊಂದ ಕೊಲೆಯಿದೀಗ ೨

ಹಳ್ಳಯ್ಯಮಧುವಯ್ಯಗಳಿಗೆ ಬೇಗದಿ ಶಿವ , . . ರಗಸೀಳಿ ನಮ್ಮ
ಕಲ್ಯಾಣದೊಳಗೊಂದು ಎಳೆಹೂಟವಾದ ಕಥಾಂತ್ರ ಕೇಳಿ
ಬಲ್ಲ ಮಹಾತ್ಮರಿಗೆಲ್ಲವು ಬಿನ್ನಹವರಿದು ಕೇಳಿ ನಮ್ಮ
ಕಲ್ಲೇಶಲಿಂಗನು ಕರುಣದಿಂ ಬಂದ ಬಲ್ಲವರು ಕೇಳಿ ೩

೪೧

ರಾಗ ॥ ವರಾಳಿ

ಬ್ರಹ್ಮನು ವಿಷ್ಣುವು ರುದ್ರನು ತಮ್ಮ ತಾವರಿಯಂದೆ
ಹಮ್ಮಿನಿಂ ಕೆಟ್ಟರೆಲವೊ
ನಮ್ಮಯ್ಯನಿಗೆ ಪಂಚಮುಖವಿಲ್ಲ ಕಾಣಿರೊ
ಕುನ್ನಿಮಾನವಗಳಿರ ॥ ಪಲ್ಲ ॥

ಐದುಮುಕ್ಕಣ್ಣನ ಭುಜವು ನಂದಿವಾಹನವೆಂದು
ವಂದಿಸುವರು ಕೇಳಿರೊ
ಆದು ನಂದಿವಾಹನವಲ್ಲ ಹಂದಿವಾಹನವದು
ಹಂದಿಮಾನವಗಳಿರ ೧

ಮುಖವಿಲ್ಲ ಅವನಿಗೆ ಮೂರುಕಣ್ಣುವಗಿಲ್ಲ
ಆಕ್ಕು ವಿರುಪಾಕ್ಷವವನು
ಮುಖವೈದುಳ್ಳನೊಡೆಯು ತಾನಾಡುವ
ವಿಪರೀತದಾಟವಿದು ೨

ಐದುಮುಖವುಂ ಪುಟ್ಟಿಸಿ ಆದಿಯು ತೋರದೆ
ಆಡಿಸಿ ನೋಡುವನು

ಆದಿ ನಮ್ಮಯ್ಯನು ಆಕಾರದವನಲ್ಲ
ಮಾದಿಗರೆಲ್ಲ ಕೇಳಿ ೩

ಏಕೋದೇವನೆ ಆದಿಕರಿಯ ಮಂಟಪದೊಳು
ಜ್ಯೋತಿಮಯವಾಗಿಹನು
ಈ ಕಲಿಯುಗ ಕಡೆಯ ಕುಂಭಕ್ಕೆ ರಥವೇರಿ
ಆ ಪ್ರಭುರಾಯ ಬಂದ ೪

ಬಿಳಿಯವಾಹನವೇರಿ ಬಿರಿದಿನ ಟೆಕ್ಕೆಯು
ತಳತಳಿಸುವ ಕಾಂತಿಯು
ಅಯ್ಯನ ಕರದ ಕಪ್ಪರ ತುಳುಕಿ ಮರುಳುತಂಡಗಳೆಲ್ಲ
ಸುರಿದು ಚಪ್ಪರಿದಾಡುತ ೫

ಮಂಡಲದೊಳಗೆಲ್ಲ ಬಂಡಿಗಳು ಕಟ್ಟಿ
ಚಂಡಿ ಚಾಮುಂಡಿಯರು ನಮ್ಮ
ಚಂಡಿಕಾದೇವಿಯರ ಚಲ್ಲಾಟದ ಮೊದಲಿದು
ಲಂಡಿ ಮಾನವಗಳಿರ ೬

ಸಗಣಿಗೆ ಸಾವಿರಹುಳುವು ಮಧ್ಯಾಹ್ನಕ್ಕೆ ಲಯವು
ಸಟೆಯ ಮಾನವಗಳಿರ ನಮ್ಮ
ಸಗುಣ ನಿರ್ಗುಣ ನಿರ್ಮಳಶಾಂತ ನಿಶ್ಚಿಂತನ
ಹೊಗಳುತ ನಾ ಬಂದೆನು ೭

ಅಗಳ ದಾಂಟಿಹೆನೆಂದು ಆದಿಯ ಕಾಣದೆ
ಅಗಳೊಳು ಬಿದ್ದಿಹರು
ಅಗಣಿತಮಹಿಮನು ಎತ್ತಿ ತಾನಾಡಿದ
ಆದಿನಿರಂಜನನು ೮

ರಸವಾಯಿತು ರಸವೇರಿತು ರಸ ತುಂಬಿ ತೊಟ್ಟಿಟ್ಟು
ರಕ್ತಾಕ್ಷಿಯೊಳು ರಾಮೇಶ
ರಜತಗಿರಿಗೆ ಒಡೆಯ [ಪಾರ್ವತಿಯರ] ಸನ
ಹೊಗಳುತ ನಾ ಬಂದೆನು ೯

ಕ್ರೋಧನ ಸಂವತ್ಸರಕೆ ಆದಿ ಅಲ್ಲಮಸಿದ್ಧ
ಶೋಧಿಸಿ ತನ್ನವರ
ಭವವ್ಯಥೆಯ ಪರಿಹರಿಸಿ ಚೆನ್ನಸಂಗಯ್ಯನು
ಕೂಡಿ ತನ್ನವರೊಳಗೆ ೧೦

ಕ್ಷಯುಪಾಪವು ಕ್ಷಯುಕರ್ಮವು ಕ್ಷಯುವಾಯಿತು ಬಂಧನವು
ಕ್ಷಯುಸಂವತ್ಸರದೊಳಗೆ
ಕಲಿಭಕ್ತ ರತಿಯೊಳಗೆ ಕಾಮುನೆಂದೆನಿಸು
ಕಾಲ ಕಾಲಾಂತಕನು ॥೧॥

ಪ್ರಭುಬಂದನು ಪ್ರಭುನಿಂದನು
ಪ್ರಭುಸಂ*

೪೨

ಕುನ್ನಿಮಾನವಗಳಿರ ನಮ್ಮಯ್ಯ ಬಂದಿಹನು
ಚೆನ್ನಸಿದ್ಧ ನಾ ಕನ್ನಡಕೆ ಹೋಗಿದ್ದ ಚಿಕ್ಕಸಿದ್ಧೇಶ್ವರನು
ಹೊನ್ನಮ್ಮನಿಗೆ ಕಂಕಣವನಿತ್ತ ಕುರುಹ
ಮನ್ನಣೆಯು ಪ್ರಮಥರೆಲ್ಲರು ಕೂಡಿ ಬಂದಿಹನು
ಕರ್ಮಿಗಳು ಕಾಣದಿಹ ಕಡೆಸುಟ್ಟ ವಾಲೆ
ಮರ್ಮವನು ತಿಳಿದು ತಮ್ಮೊಳಗೆ ತಾವಿರುತಿಹರ
ಮನ್ನಿಸುತ ಬಂದಿಹನು ಚೆನ್ನಸಿದ್ಧೇಶ ॥೧॥

ಕಕ್ಕಯ್ಯಗಳ ದಾಸಿ ಕಾಡಬೆರಣಿಗೆ ಬರಲು
ಚೆನ್ನಯ್ಯಗಳ ದಾಸಿಮಗನು ಬರೆ ಕಂಡು
ಸನ್ಮತದಿ ಆವರಿಬ್ಬರಿಗೆ ಪುಟ್ಟಿದವ ನಾನು
ಚೆನ್ನಯ್ಯಗಳ ದಾಸಿ ಮಗನ ಮಗುವೆಂದು
ಉನ್ನಂತ ಅನಿಮಿಷಲಿಂಗ ಹಸ್ತಕೆ ಬರಲು
ಚೆನ್ನಬಸವಣ್ಣಂಗೆಯೆನ್ನ ಮಾರಿದರು
ನಿಮ್ಮಾಣೆ ನಿಮ್ಮ ಪ್ರಮಥರಾಣೆಯೆಂದೆನ್ನ
ತಮ್ಮವರಿಗಿತ್ತನೈ ಚೆನ್ನಬಸವಣ್ಣ ॥೨॥

ಅನುಮಿಷನು ಚೆನ್ನಬಸವೇಶನೊಳ್ಬಂದುದನು
ಮನುಮುನಿಗಳರಿಯರೆಲವೊ ಮರವೆ ಮಾನವರ
ಧನಧಾನ್ಯಸಂಪ[ತ್ತು ಸಂಗ್ರ]ಹಿಸಿ ದಯ ಸಿಂ[ಧು ತಾ]ನು
ನಿಮಗೆ ಕಾಣಿಸ ಕರಿಯುಬಸವ ಗೌಡಿಯುನು
ತನಗೆ ಬೇಕಾದಲ್ಲಿ ತಾ ತಿಳಿದು
. . . ವಿಮುಳಿಗರುಹಿದ ಮಾಯೆಗರುವ ಮರೆಸಿದನು

* ಇಲ್ಲಿಂದ ೮ ಓಲೆಗಳು ಇಲ್ಲ.

ಬನವಾಸೆಯೊಳಗೆ ಮದ್ದಳೆಯು ಬಾರಿಸಿದನುವ
ನಿಮಗೆ ತೋರಿಸಿ ನಮ್ಮ ಗುರು ಗೊಹೇಶ್ವರನು ೩

ಕಡೆಯು ಕುಂಭದಿ ಕಲುಂಧರ ಈಡೆಯು ಬಸವೇಶ
ನಡರಿ ಬಂದುಂದ ಕಾಣಲರಿದು ಕಾಬವಗೆ
ಎಡೆಯಿಡದೆ ನಡುಮಧ್ಯ ಮಣಿಖಚಿತಪೀಠದೊಳು
ದೃಢ ಚೆನ್ನಸಂಗಯ್ಯ ನುಡಿದ ಮಡದಿಯೊಳು
ಕಡುಪಾತಕರು ಕೇಳಿ ಸಡಗರವನೇನೆಂಬೆ
ಪಡುವಣದಿಕ್ಕಿನೊಳು ಕದನ ಹಣ್ಣಿದುದ
ಕಡಿದಾಡಿ ಮಡಿದು ಕಾವೇರಿಮಧ್ಯದೊಳ್ನಿಂದು
ಅಡಿಗಡಿಗೆ ಸಾರಿದೆ ನಮ್ಮ ಗುರುಗೊಹೇಶ್ವರನ ೪

ಆದಿಯುರಿಯುದ ವೇದ ಹೊಲೆಮಾದಿಗರ ಮುಚ್ಚಿರವು
ಸಾಧಕರಿಗವಸಾಧ್ಯವಲ್ಲ ಷಣ್ಮುಖನು
ವೇದಪುರಾಣಶಾಸ್ತ್ರವು ಸಂತೆಮಾತೆಂದು
ನಾದವೇರಿಸಿದ ಬ್ರಹ್ಮಾಂಡದೊಳಗಿನ್ನು
ಹಾದಿಗಾಣದ ಶುನಿಯು ಬಾಧೆಯೊಳು ಸಿಲುಕಿ
ಕೊಲೆಗಾಗಿ ಬಗುಳುವ ತೆರನು ವಾದಿಮಾನುವರ
ವೇದ ಪುರಾಣ ಶಾಸ್ತ್ರದ ಮೇಲೆ ಸೊಡ್ಡೆಂದು
ಆದಿಗುರು ಬಸವಲಿಂಗಾಂಗಿ ಆಡಿದನು ೫

ಶಾಸ್ತ್ರ ಪುರಾಣ ಸಾಧಿಸಿ ಕಾಣದಪ್ರತಿಮ
ನಿತ್ಯ ಮುದ್ಗುರು ಚೆನ್ನ ಭಕ್ತ ಭವರಹಿತ
ಸತ್ಯ ಹುಟ್ಟುವ ಅಜನ ವ್ಯರ್ಥವೇದವನೋದಿ
ಭಕ್ತನೊಳು ಸೆಣಸುವರೆ ಬರಿದೆ ಭವಿಗಳಿರ
ತತ್ತಳನೆ ತುಳಿದು ದಿಂ ದಿಂ ದಿಮಿಕುಯೆಂದು
ಅರ್ತಿಯಿಂ ಕಟ್ಟಳೆ ಕಾಳಾಸ ಪೇರಣೆಯು
ತಟ್ಟಿ ತಾನಾಡಿದೊಂದಚ್ಚರಿಯ ಸಾರಿದೆನು
ಕರ್ತೃ ಕರಿಯುಟ್ಟೆಯೊ[ಳು ಮ]ಟ್ಟೆಯಾಡಿದನು ೬

ತಾಲೆಲ್ಲೆಲೊ ಮಾಯೆ ತಾಲೆಲ್ಲೆಲೊ ಮಾಯೆ
ತಾಲೆಲ್ಲೆಲೊಯೆಂದು ಚಂದ್ರಶೇಖರನು
ಮಾಯು ಮೂಗರಿದು ಮುಂದಲೆಯ ಮೇಲಕೆ
ಕಟ್ಟಿ ಕಾಲ್ಗಡಿದು ಹಗರಣವನಾಡಿಸಿದ ಮಾಯೆ
ಹೇಳಲಳವಲ್ಲ ಗುರುರಾಯ ತಾಮಸಮಾಯು

ಹೇಳಹೆಸರಿಲ್ಲದಂತವ[ತಾನ]ಡಗಿದ
. . . ಳವಾಸಾಳು ಮನೋವಲ್ಲಭನು
ದೇವಗುರು ಬಸವಲಿಂಗಾಂಗಿ ಆಡಿದನು ೭

[ಚಿನ್ನ] ನಂತಹರೆಲ್ಲ ಚಿನ್ನದಂತಹರಿಲ್ಲ
ಮಣ್ಣ ತೊಳೆದರೆ ಚಿನ್ನ ಸಿಕ್ಕಿದಂತೀಗ
ಚೆನ್ನಬಸವೇಶ್ವರನು ಚಿನ್ನವನು ಕಯ್ಯೊಳಗೆ
ಕರ್ಮಿಗಳ ಕರಿಯಾಳು ತೋರಿ ಸಾರಿದನು
ನಮ್ಮವರಿಗಿದು ನಮ್ಮ ಒದುಕು ಬಸವನ ಭಾಗ್ಯ
ನಿರ್ಮಲದ ನಿಶ್ಚಿಂತ ನಿರ್ವಾಣಿ ಗು[ರು ಗೊಹೇಶ್ವರ]
ಮರ್ಮವನು ತಿಳಿದು ತಮ್ಮೊಳಗೆ ತಾವಿರುತಿಪರ
ಮನ್ನಿಸುತ ಬಂದಿಹನು ಚೆನ್ನಬಸವಣ್ಣ ೮

. . . . . ಏಯನೆ ಹೊದ್ದ . . . . .
. . . . . ಗಮವೆಂಬ ಗರ್ವವನು ದಾರವನೆ ಹಾಕಿ
ಬ್ರಾಹ್ಮಣನೆಂಬ ಪರಿಯು ಆದಿಯರಿಯದೆ . . .
. . . ಸನ್ಯಾಸಿಯೆನಿಸಿಹರ
ಕರೆದುಕ್ಕಿನೊಳಗಿಕ್ಕಿ ತಿವಿತಿವಿದು ಕೆಡಹಿ
ಜೇಡಿನಾಮವನಿಟ್ಟು ದಾಸನೆಂದೆನಿಸಿಹರ
[ಕೂಡೆ] ಹೋರಿದ ಗಾರುಡಿಗ ಬಸವ
ಕಾಗೆಹಿಂಡಿನೊಳಿಪ್ಪ ಕೋಗಿಲಂತಿಹ ನಮ್ಮ
ಆದಿಶರಣರ ಆದು ಅರಸುತ್ತ ಬಂದೆ ೯

ಬಲ್ಲೆಯೆಂಬುದ ಬಿಡಿರಿ ಹುಲ್ಲುಮಾನವಗಳಿರ
ಎಲ್ಲ ಹುಳುವಿಂದಧಿಕ ಬಲ್ಲೆನೆಂಬ್ಬಾಳುವು
ಫುಲ್ಲಶರಗೀಡಾಗಿ ಕೊಲ್ವ ಕಾಲನ ಬಾಧೆ
ಯಲ್ಲಿರುವ ನರಕಿಗಳು ಬಂದಿರೆ ಹೀಗೆ
ಕಲ್ಲೇಶಲಿಂಗದೊಳು ಕೂಡಿ ಕರುಣಾಕರನು
ಅಲ್ಲಿ ಮೈಮರೆದೊರಗಿ ಮೈಮರೆದು ತಾನಾಗಿ
ಅಲ್ಲಮನು ಗು[ರು ಎಡೆಯೂ]ರ ಸಿದ್ಧಲಿಂಗ ಕೂಡಲ
ಚೆನ್ನಮಲ್ಲಿಕಾರ್ಜುನಲಿಂಗ ಬಸವನರಿರಲವೊ ೧೦

ಮಾಯಕೋಲಾಹಳ ಮನ್ಮಥನ ಮರ್ದಿಸಿದ
ಹರ ಕಾಲಸಂಹಾರಿ ಕಾಪಾಲಿ ತ್ರಿಶೂಲಿ
ಭಾಳಲೋಚನ ಬಸವಲಿಂಗ ಬಸವಯ್ಯನನು
ಸೂಳೆಯರು ಕಾಣರೆಲೊ ನೂಕಿ ಗೊಹೇಶ್ವರನ

ಆಳಿನಾಳ್ಕರಿಯು ಭಸವನ ಕೂಡಿ ಬಂದುದನು
ಭಾಳನೇತ್ರನೆ ಬಲ್ಲ ಭ್ರಮಿತಬಲಿಗಳಿರ
ಏಳುನೂರೆಪ್ಪತ್ತು ಅಮರಗಣತಿಂಥಿಣಿಯೊ
ಓಲಾಡಿ ಬೆಳೆದೆ ನಾಂ ಕಾಳ್ಬಸವನೆಂದು ೧೧

ಒರಿಯು ಬೊಮ್ಮವನಾಡಿ ಬರಿಸೂರೆ ಹೋದರೆಲೊ
ಗುರುವ ಮರೆದಿಹ ನರನ ಉಪದೇಶವೆಂದು
ಶರಣರಾಳನೆ ಹಳಿದು ಸಟೆಯುನೆ ನಿಜವೆಂದು
ನರಕದೊಳು ಸೆರೆಯಾಗಿರೆಲೊ ನರಕಿಗಳಿರ
ಪರಮ ಗುರುಸಿದ್ಧ ಗೊಹೇಶ್ವರಲಿಂಗವರಿಯುದಿಹ
ಪರವಾದಿಗಳಗಂಡ ಕರಿಬಸವನಿರವ[ರಿಯದಿಹ]
ವರದು ತಂದನು ಚಿನ್ನವರದ ಹದಿನಾರಕ್ಕೆ
ಸರಿಯಾಗಿ ತೋರಿತ್ತು ಮತ್ತೊಂದು ಬಣ್ಣ ೧೨

ಗುರುವರಿಯುದಿಹ ನರನ ಗುರುವೆಂಬ ಪರಿಯಲ್ಲಿ
ನರನೆ ಸಾವನು ತಾಳ್ದ ಕರಿಬಸವನಲ್ಲ
ಭರದಿಂದ ಭಕ್ತಗಣತಿಂಥಿಣಿಗಳು ಕೂಡಿ
ವಿವರಿಸುವಗರಿದು ಪರಮಪ್ರಭುವೆ ಬಲ್ಲ
ಗುರು ಲಿಂಗ ಜಂಗಮವು ನಾನೆಂಬ ನರಕಿಗಳ
ತರಿದು ಮರುಳ್ತಂಡಕುಣಲಿತ್ತಭವ ಭಲ
ಪರವಾದಿಗಳ ಗಂಡ ಗುರುಸಿದ್ಧಬಸವನನು
ಗುರುಗೋಹೇಶ್ವರನೆಂಬ[ತೆರನ] ತಾ ಬಲ್ಲ ೧೩

ಗುರು ಲಿಂಗ ಜಂಗಮವನರಿಯುದಿಹ
ಪರವಾದಿಗಳ ಗಂಡಭೇರುಂಡ ಇರಿವಪ್ರಚಂಡ
ಗುರುವೆ ನಿಮಗೆ ಈ ರುದ್ರ ಹರಿಯು ನಿಮಗೆಯು
ಲಿಂಗ ಅಜನು ಜಂಗಮು ನಿಮಗೆ ಅಧಮಮಾನವರ
ಅಧಮರೆ ನಿಮ್ಮ ದೇವರುಯೆಂದು ಮಲೆತಿಹರು
ಭಜನೆಗಳು ಬೇಡ ನಿಮಗೇಕೆ ಬೊಮ್ಮಗಳು
ಕದನಪ್ರಚಂಡ ಕರಿಬಸವ ಸಾರಿದ ತೋರಿ
ಗುರು ಲಿಂಗ ಜಂಗಮವು ತನ್ನೊಳಿಹುದೆಂದು ೧೪

ಇಷ್ಟಗುರು ವಿಶ್ವಾಸ ಪ್ರಾಣಲಿಂಗವು ಕೇಳಿ
ಇಷ್ಟವತಿ ಭಾವ ಜಗದಾದಿ ಜಂಗಮವು
ಇಷ್ಟ್ಟ ತನ್ನೊಳಗಡಗಿ ತೋರಿತೋರುವ
ಪರಮನೆತ್ತ ಬಲ್ಲರು ನೀವು ನಿತ್ಯನಿರ್ವಯುಲ

ಭಕ್ತರೊಳಗಡಗಿಹನು ಸಚ್ಚಿದಾನಂದ
ಕೆಟ್ಟುಹೋದೆನು ಬಟ್ಟಭವದೊಳಗೆ ಬಿದ್ದು
ಕಷ್ಟಕರ್ಮಿಗಳ ಕಾಣರು ಕರಿಯಬಸವನನು
ಎಷ್ಟು ಹೇಳಿದರರಿಯರೆಲೊ ಮರುಳುಗಳಿರ ೧೫

ಅಜ ಹರಿಯು ರುದ್ರರುಗಳಧಮರಾದುದ ಕೇಳಿ
ತ್ರಿಭುವನಕೆ ತಾವೆ ಮೂವರು ಕರ್ತರೆಂದು
ಅಜನು ಸೃಷ್ಟಿಪೆನೆಂಬ ಹರಿಯು ರಕ್ಷಿಪೆನೆಂಬ
ತ್ರಿಜಗವನು ಸಂಪರಿಪೆ ರುದ್ರ ತಾನೆಂಬ
ಅಧಮ ಮೂವರ ಕಡಿದು ಅಜಕಪಾಲಕೆ ಒಡಿಸಿ
ಕಂಜನ ದೈವದ ಗಂಡ ಕುಟಿಲಕೋಳಾಹಳನು
ಮಜ ಭಾಪುರೆ ಚೆನ್ನಬಸವ ದಂಡಾಧೀಶ
ಧ್ವಜವೆತ್ತಿ ಸಾರಿದನು ದ್ವಿಜಮಧ್ಯದೊಳಗೆ ೧೬

ಒಂದೂರೊಳಿಹ ಭವಿಗಳಂದವಿದನೇನೆಂಬೆ
ಹೆಂಡಗುಡಿಗಳ ಕೇರಿ ತಂಡತಂಡದಲಿ
ಒಂದೊಂದು ಆಹರವ ತಿಂಬ ಕಟುಕರ ಕೇರಿ
ಬ್ರಹ್ಮಾಂಡದಿಂದಧಿಕ ಪಿಂಡಾಂಡದೊಳಗೆ
ಹಂದಿ ಪುರಹರಸಂತೆಯೊಳು ನೆರದು ಭೋರ್ಮೊರೆವುತಿರೆ
ಲಿಂಗವಾರ್ತೆಯ ಕೇಳಬಹುದು ಗಲಭೆಯೊಳು
ಹಂದಿಮಾನವಗಳಿರ ಅಂಗದನುಭವವರಿದು
ಕಂಗಳಿಲ್ಲದ ಕಂಗಳಲಿ ಕಾಣ್ಬಗರಿದು ೧೭

ತನ್ನ ವಿನೋದಕ್ಕೆ ಬ್ರಹ್ಮಾಂಡವಂ ರಚಿಸಿ
ನಿರ್ಮಿಸಿದ ಎಂಭತ್ತನಾಲ್ಕುಲಕ್ಷಜತ್ವಗಳ
ಕರ್ಮಜೀವವ ತೆಗೆದು ಕಲುಕಂಟಿಕ ಕಡೆದೀಗ
ಮರ್ಮವರಿಯದ ಕರ್ಮಿಗಳಿಗೆ ಮಾರಿದುದ
ತಮ್ಮ ಪ್ರಾಣಲಿಂಗವೆಂಬರು ತಾಮಸಿಗಳೆಲ್ಲ
ಕರ್ಮಹರ ಅಭವ ಕಾಲಾಂತಕನ ಮರೆದು
ಬೊಮ್ಮಗಳನಾಡಿ ಒರೆ ಅದ್ವೈತವನ್ನುಡಿವ
ಹೆಮ್ಮೆಗಳ ಮುರಿದ ನಮ್ಮ ಚೆನ್ನಬಸವಣ್ಣ ೧೮

ಭವರಹಿತ ಅಭವನನು ಭವನು ಪೂಜಿಪೆನೆಂಬ
ಭವಿ ಕಾಣಬಾರದಿಹ ಅಭವಲಿಂಗ
ಭವ ಹರಿದು ಅಭವನಾದವಗೆ ಅಭವನ ಪೂಜೆ
ಭವಭವದ ಭವಿಗಳಿಗೆ ಭವರಹಿತ ಶಿವನೆ

ಭವಗೆ ಅಭವಂಗೆ ಸಂಗಡಿಸುವದೆ ಕೇಳಿರೆಲೊ
ಭವಿಗಳಿಗೆ ಭವರೋಗವೈದ್ಯ ತಾನೆ
ಭವಿಯಹಾಗಿ ತೋರುವದು ರೋಗಿಗಮೃತವನೆರೆಯೆ
ಸವಿಯಹಾಗಿ ಸವಿವನೆ ಸಟೆಯೆ ಮಾನವರ ೧೯

ಲಿಂಗದಂಗವು ಭಕ್ತ ಭಕ್ತದಂಗವು ಲಿಂಗ
ಲಿಂಗಾಂಗ ಅಂಗಲಿಂಗವು ಭಕ್ತದೇವ
ಆ ಲಿಂಗದೊಳು ಕಾಮಕ್ರೋಧವು ಬಲಿದು
ಕರಣೇಂದ್ರಿ ಲಿಂಗವಾದವ ಬಲ್ಲ
ಲಿಂಗದೊಡೆಯನು ಲಿಂಗಸಮರಸವಾಗಿ
ಲಿಂಗವೇ ತಾನಾಗಿ ಲಿಂಗನಿಜದಾನಂದ
ನಿಖಿಳ ನಿರಾಳಲಿಂಗ ವಂಚಕಕರರಿಯರೆಲವೊ
ಬೆರಳಿಟ್ಟು ಮತ್ತೊಂದು ಪ್ರಾಣ್ಲಿಂಗವೆಂದೆಂಬ ನರಕಿಗಳು ೨೦

ವಿಷ್ಟಪ್ರಾಣಭಾವವೆಂದೆಂಬ ಪರಿಗಳನು
ನಷ್ಟಜೀವಿಗಳೆತ್ತ ಬಲ್ಲರೆಲವೊ
ವಿಷ್ಟ ಪ್ರಾಣದೊಳಡಗಿ ಪ್ರಾಣ ಭಾವದೊಳಡಗಿ
ಭಕ್ತದೇಹಿಕದೇವನಾದ ದೇಶಿಕನು
ಭ್ರಷ್ಟಮಾನವಗಳಿರ ವಿಪರೀತ ಮಹಾಮಹಿಮ
ಚಿಕ್ಕಕರಿಬಸವಂಗೆ ಕೊಟ್ಟ ಮಣಿಹವನು
ಇತ್ತ ತಾವೆತ್ತ ತಂದರು ಅಷ್ಟದಿಕ್ಕಿನೊಳು
ಕರ್ತೃವೊಬ್ಬನೆಯೆಂದು ಸಾರಿ ಡಂಗುರವ ೨೧

ಪಾಪವಿಷ್ಟವ ತುಳಿದು ಪ್ರಾಣಲಿಂಗದಿ ಬಲಿದು
ಪ್ರಾಣಲಿಂಗದಿ ಭಾವಭರಿತನಾಗಿ
ಆ ಪರಬ್ರಹ್ಮ ತಾನಾದ ಮಹಾಮಹಿಮಂಗೆ
ಪಾಪಿಗಳು ಸರಿಬಹರೆ ಪರಮ ಪತಿವ್ರತೆಗೆ
ಸೂಕರನು ಮದಕರಿಯು ಸರಿಯೆಂಬ ಪಾತಕರ
ಆ ಕರಿಯಬಸವೆರಡು ಕಾಲಿಲಗುಂಪಿ
ಜೋಕೆಯಲಿ ಕಟ್ಟಿ ಗರಗಸವ ಕರದೊಳು ಪಿಡಿದು
ಆ ಪರಮ ನಗುವಂತೆ ಕೊರೆದನರ್ತಿಯಲಿ ೨೨

ಷಡುಂದರುಶನಕೆ ಒಡೆಯು ಷಡುಸ್ಥಲದ ಷಣ್ಮುಖನು
ಜಡಮಾನವಗಳಿರ ಷಡುಸ್ಥಲವದೇನೊ
ಒಡಲಾಸೆಗೆ ಪೊಕ್ಕು ಮನೆಮನೆಯ ತಿರುಗುವ ಹಂದಿ
ಮೃಡಶರಣರಂತಹರೆ ಮಡೆಯು ಮಾನವರ

ಕಡೆಯಾಟವಿದು ಕೇಳಿ ನಿಷ್ಠೂರವನೆ ಸಾರಿ
ಕಡಿಸಿ ಕೊಂಡಾಡುತಿಹ ಕರ್ಮಭವಹರನು
ಒಡೆಯ ಕೂಡಲ ಚೆನ್ನಸಂಗಮಬಸವನ ಕೂಡಿ
ನಡೆಸಿ ತೋರುತ್ತಿಹನು ಷಡುಸ್ಥಲವಿದೆಂದು ೨೩

ಸತ್ತು ಹುಟ್ಟುವುದೆತ್ತ ಷಡುಸ್ಥಲವು ನಿಮಗೆತ್ತ
ಕರ್ತೃಮಾನವರೆತ್ತ ಕಾರಣಿಕರೆತ್ತ
ನಿತ್ಯವುಳ್ಳವರೆತ್ತ ನಿಜವರಿಯದವರೆತ್ತ ಈ
ಮರ್ತ್ಯದವರೆತ್ತ ಮಹಾಘನಮಹಿಮನೆತ್ತ
ಭಕ್ತಿಯರಿಯದ ಬಾಯಬರಿಯ ಬೊಮ್ಮಗಳೆತ್ತ
ಭಕ್ತದೇಹಿಕದೇವ ಭ್ರಮಿತ ಭವಿಯೆತ್ತ
ಮೃತ್ಯುಂಜಯ ಮರಿಕರಿಬಸವನಾಡಿಸುವ.
ಅರ್ತಿ ಆನಂದಸಂವಚ್ಛರವಿದೆಂದು ೨೪

. . . . . ಡುವಾರ ನೆಲೆಯನರಿದವರಾರು.
ಷಡುವರ್ಣಲಿಂಗ ಶರಣಸ್ಥಲವ ಬರಿದು
ಒಡಗೂಡಿ ಏಕಮುಖದೊಳು ನೋಡಿ ಒಮ್ಮನದ
ಪಡಿಯನಿತ್ತವ ಬಲ್ಲ ಷಡುಸ್ಥಲದ ಬೆಡಗ
ಒಡನಿಬ್ಬರೊಂದಾಗಿ ಒಡೆಯ ಮಡದಿಯ ಕೂಡಿ
ಒಡೆಯ ಬಂಟನು ಬಂಟ ದೇವ ತಾನಾಗಿ
ನುಡಿದುದೆ ಷಡುಸ್ಥಲವು ಮಡೆಯ ಮಾನವಗಳಿರ
ನುಡಿದಂತೆ ನಡೆಯಬಲ್ಲುದೆ ಷಡಕ್ಷರವು ೨೫

ಹಾಡಿ ಕೆಲಬರ ಹರಸಿ ನೋಡಿ ಕೆಲಬರ ನುಡಿಸಿ
ಕೊಂಡಾಡಿ ಕೆಲಬರ ಜರದೀಡಾಡಿ ಕರ್ಮವನು
ಕೂಡಬಲ್ಲನು ನಮ್ಮ ಗಾಡಿಕಾರಲ್ಲಮನ
ಬೀಡ ಕಾಣುವಗರಿದು ಮೂಢಮಾನುವರ
ನಾಡಾಡಿದೈವದಂತಲ್ಲ ಅಸಮಾನವಿದು
ಕಾಡಹೂವನು ಕಲ್ಲಲಿಂಗವೆಂಬವಗೆ
ಆರೂಢಪದವೆತ್ತ ಐಕ್ಯಸ್ಥಲ ನಿಮಗೆತ್ತ
ಹಾಡಬಹುದು ಆಡಬಾರದಿಹುದೆಲವೊ ೨೬

ಆರನತಿಗಳೆದು ಆರುಹೆಂಬ ಕುರುಹು ಮರೆದು
ಮೀರಿತ್ತು ಮೂರರಿಂದತ್ತ ಮಹಘನವು
ತೋರಿತ್ತು ನಿಜದ ನಿರ್ವಯಲ ನಿತ್ಯಾನಂದ
ಬೀರಿತ್ತು ಭಕ್ತಿರಸವೆಂಬ ನೇಣನೊಳು

ಕಾರಣಿಕನ ಕಾಣಿರೆಲೊ ಕರಿಯುಬಸವನು ತಂದ
ಭೂರಿ ಮಾನವಗಳಿರ ಭೂತಳಕಿದರಿದು
ಸಾರಿಹನು ತನ್ನ ತಾನರಿದ ಮಹ ಶರಣನೊಳು
ಪುರಹರ ಗುರು ಗೊಹೇಶ್ವರಲಿಂಗ ಸಂಗ ೨೭

೪೩

ರಾಗ ॥ ತೆಲುಗ ಕಾಂಬೋದಿ

ಮುಡಿವಳಯ್ಯಗಳ ಮಗ ನಾನು ಆದಿ
ಮಡದಿಯುರ ಸೇಲೆಯಾನು ತೊಳೆವ
ಕಡುಪಾತಕರು ಕೇಳಿರೆಲ್ಲವೊ ಕಡೆಯು
ಮುಡಿ ಮಾಡ ಬಂದೆ ನಾನು ॥ ಪಲ್ಲ ॥

ಕಲಿಯೆಂಬ ಕರ್ಮಗಳ ಸುಟ್ಟು ಮಾಯಾ
ಮಲವೆಂಬ ಮಲಿನವ ತೊಳೆದು
ಬಿಳಿದ ತಂದಿಹ ಹಳೆಯು ನಾನು
ಆದಿ ಗುರುಭಕ್ತರುಗಳರಿದು ಕೊಳ್ಳಿ ೧

ಕಾವೇರಿಮಧ್ಯದೊಳು ನಿಂದು ಮೆರೆದ
ನಾರಸಿಂಹವತಾರವಳಿದು
ವೀರವಸವಂತನಾಳೆಂದು ನಾನು
ಸಾರಿದೆನು ಧರೆಯೊಳಗೆ ನಿಂದು ೨

ರುದ್ರಮುನಿ ಮಲ್ಲಿಕಾರ್ಜುನನು ಆದಿ
ಸಿದ್ಧ ಬಸವೇಶನೊಳು ಕೂಡಿ
ಆದ್ಯರೆಲ್ಲರು ಒಳಗ ನೋಡಿ
ಆದಿಲಿಂಗ ಬಸವಯೆಂದು ಪಾಡಿ ೩

ಆದಿ ಶ್ರೀ ಶೈಲ ಕಾವೇರಿಮಧ್ಯ
ದೇವಸಭೆಯಾಯಿತ್ತು ಇಲ್ಲಿ
ಮೂದೇವರೊಡೆಯು ಭೂತೇಶ
ಮುಕ್ತಿದೋರುತ್ತ ನಿಂದ ಮಲ್ಲೇಶ ೪

ಕುಂಭಕ್ಕೆ ಬಿಟ್ಟ ಕುರಿಗಳನು ಕಡೆಯು
ಕುಂಭಕ್ಕೆ ತಂದ ಸಂಭವನು
ಕುಂಭೇಶಲಿಂಗಕ್ಕೆ ರಥವೇರಿ ಬಂದ
ಸಂಭ್ರಮವ ಸಾರಿದೆನು ೫

ನಾ ಬಲ್ಲ ಹಾಗೆನ್ನುತವರೆಯೆಂಬ
ನರಕಿಗಳು ಕೇಳಿ ನೀವೆಲ್ಲ
ನೀ ಬಲ್ಲುದೇನೆಲವೊ ನಾಯೆ ನಿನ್ನ
ಬಾಳೇನು ಮುಕ್ಕಾಲುಗಳಿಗೆ ೬

ಒಂದು ಸಂವತ್ಸರದ ಒಳಗೆ ನಾಡ
ಹಂದಿಗಳ ತಿವಿತಿವಿದು ಕೆಡಹಿ
ಸಂದಣಿಪ ಭಕ್ತರುಗಳೆಲ್ಲ ಕೂಡಿ
[ಸಂದು]ಗಳ ನೋಡುತ ಅಲ್ಲ ೭

ಶರಣರಿಗೆ ವಸವಂತ ಬಂದು ಸತ್ಯ
ಭಕ್ತರಿಗೆ ವಶವಾಗಿ ನಿಂದು
ವಿರಹ ಪುಟ್ಟಿಸಿ ವೀರ ಬಂದು ವೀರ
ವಸವಂತರಾಯ ತಾನಿಂದು ೮

## ೪೪

ರಾಗ ॥ ಭೈರವಿ

ಮುಸುಕಿಟ್ಟನು ಬಸವಯ್ಯನು
ವಸುಧೆಯೊಳಿಹ ಪಾತಕರನು
ಮಿಸುಮಿಲಿ ಮಾಡಬೇಕೆಂದಸಮನೊಳಾಡಿದನು ॥ ಪಲ್ಲ ॥

ಅಸಮನ ಅಡಿ[ಗಳ]ಆರುಕಾಣದ ಮುಸುಕು
ಬಸವಗಣಂಗಳ ಭ್ರಷ್ಟರು ಕಾಣದ ಮುಸುಕು
ಕುಶಲಿಗಳಿಗರುಹಿಟ್ಟು ಕೂಡಿದ ಕುರುಹಿನ ಮುಸುಕು
ಶಶಿಧರಸಮಯದ ಸಡರಿಗೆ ಸಂದೇಹದ ಮುಸುಕು ೧

ಅಜ ಹರಿ ರುದ್ರರು ಸುರರು ಆರುಕಾಣದ ಮುಸುಕು
ಭಜನೆಗೆ ಸಿಲುಕದೆ ಬಾಹ್ಯಸ್ಥಳಕಿಟ್ಟ ಮುಸುಕು
ಮಜ ಭಾಪುರೆ ಮಹಿತಳದೊಳು ಮಾನವರರಿಯದ ಮುಸುಕು
ಸದುಹೃದಯ ಭಕ್ತರಿಗಿದು ಶಾಂತಿಯ ಕಳೆ ಮುಸುಕು ೨

ಆಕಾರ ನಿರಾಕಾರವೆಂಬ ಪರಿಯರಿಯದ ಮುಸುಕು
ಏಕೋದೇವನೊಳೇಕವಾಗಿಹ ರಸ ಮುಸುಕು
ಸಾಕಾರವಡಗಿ ಸಂದೇಹವಳಿದಿಹ ಮುಸುಕು
[ಕಾಕು]ನಾಯಕ ನರಕಿಗಳರಿಯದ ಮುಸುಕು ೩

ನರನೆ ಗುರುವೆಂಬವರ ಇರಿದು ಸೀಳುವ ಮುಸುಕು
ಪರಮ ನಿರ್ವಾಣಕ್ಕೆ ಪರಿಣಾಮದ ಮುಸುಕು
ಶರಣನ ಬಾಗಿಲ ಕಾಯಿವ ಗುರುತಿನ ಗುಪ್ತದ ಮುಸುಕು
ಕರಿಯುಬಸವನ ಕಾಣದ ಕಾವಳದ ಮುಸುಕು ೪

ಕಂಬಳಿಯ ಮುಸುಕಿಟ್ಟು ತನ್ನ ಕಾಣ್ಬಲ್ಲಿ ಕಾಣಿಪನು
ಬೆಂಬಿಡದ ಶರಣಗೆ ತವ ಬೆಡಗ ತೋರುವನು
ಕುಂಭಿನಿಗೆ ಅಪ್ರತಿಮ ಕುಟಿಲಕೋಲಾಹಳನು
ಶಂಭುವ ಲೀಲಾನಂದ ಶಂಬಾರಿಯ ವೈರಿ ೫

ಸಂಗನ ಶರಣರ ಭಾವದಿಂಗಿತವರಿವಂಥ
ಆ ಲಿಂಗಾಂಗಿಗಳಿಗೆ ಆ ಲಿಂಗವ ಬೆರಸುವನು
ಜಂಗುಳಿದೈವದಗಂಡ ಜಾಣ ಜಂಗಮಲಿಂಗ
ಸಂಗನ ಶರಣರ ಹೆರೆಹಿಂಗನು ಕೃಪಾಂಗನು ೬

೪೫

ರಾಗ ॥ ತೆಲುಗ ಕಾಂಬೋದಿ

ಹೇಳುವೆನು ಹೇಯವಿಲ್ಲದ ಭಕ್ತರಾಳಿನ ಆಳು ನಾನೆಂದು
ಕಾಗೆಯು ನುಡಿ ಕಲಿಯುಗಕ್ಕೆ ಧರ್ಮದ
ಕೋಗಿಲೆ ನುಡಿ ಸರಿಬಹುದೆ ॥ ಪಲ್ಲ ॥

ಶರಣನ ಪಾದರಕ್ಷೆಯು ಸತ್ಯಭಕ್ತರ
ಬಿರಿದಿನ ತೊಡರೆಂದು ಕಟ್ಟಿ
ಧರೆಗಿಳಿತಂದರೆನ್ನ ದಂಡನಾಯಕ ಬಸ
ವರು ಸಂಗಣಂಗಳು ಕೂಡಿ ೧

ಕೆಂಪ ನಂಜೇಶನು ಕೆಂಪ ಮಲ್ಲೇಶನು
ಕೆಂಪ ಸೋಮೇಶನ ಕೂಡಿ
ಕೆಂಪ ಗಂಗಾಧರ ಕೆಂಪ ಬಸವರಾಜ
ಕೆಂಪ ವೀರೇಶವಸಮಂತ ೨

ನೆನೆಶಕ್ತಿ ಇಚ್ಛಾಶಕ್ತಿ ಕ್ರಿಯಾಶಕ್ತಿ
ಮಾನಿನಿಯರು ಕೂಡಿಬಂದು
ಭೂನುತ ಭೂರಿದೈವದ ಗಂಡ ಚಂಡೇಶ
ಮಾನಿನಿಯರೊಳೊಡಗೂಡಿ ೩

ಭಕ್ತಿ ಒಳೆಯು ತೊಟ್ಟು ಮುಕ್ತಿ ಮೂಕುತಿಯಿಟ್ಟು
ಸತ್ಯವೆ ಸಕಲಾಭರಣ
ತರ್ಕ ತಾನೆಂದೆಂಬ ಕಾಸೆಯು ಬಿಗಿದುಟ್ಟು
ರತ್ನದೋಕುಳಿಯು ವಸವಂತ ೪

ಹದಿನೆಂಟು ಸ್ತ್ರೀಯರು ಕೂಡಿಕಾಲೆಗಳೆಂಬ
ಕಡಿದು ಪಿಡಿದವರು
ಮರುಳು ತಂಡವ ಕೂಡಿ ಮಾಯದೋಕುಳಿಗಳ
ಅರಸಿಯರುಗಳು ಚೆಲ್ಲಾಡಿ ೫

ವೀರವಸಂತರಾಯನು ನೋಡಿ ನಸುನಕ್ಕು
ಧಾರುಣಿಪಾತಕವಳಿದು
ಭೋರೆಂದು ಪೂಮಳೆಗರೆದು ದುಂದುಭಿ ಶಂಖ
ದೇವ ಸಭೆಯು ಒಂದಾಗಿ ೬

ಉಘೆ ಉಘೆ ಉಘೆಯೆಂದು ಉಘೆ ಚಾಂಗು ಭಲರೆಂದು
ಉರಿಲಿಂಗ ತಾ ತಾನೆಂದು
ಉರುಹಿ ಭಸ್ಮವನಿಟ್ಟು ಶರಣರೋಲಗದೊಳು
ಅರಸು ನಿರಂಜನಲಿಂಗ ೭

### ೪೫.

ರಾಗ ॥ ಕೇತಾರಗೌಳ

ಗುರುವೊಡ್ಡಿದಾಟವ ಎರವೆಂದು ಕಾಣುವ
ಪರವಾದಿಗಳ ಮೂಗನು
ಕೊರೆವುತಿಹನು ನಮ್ಮ ಚೆನ್ನಬಸವರಾಜ
ಹರನ ಭಕ್ತರು ಕೇಳಿರೊ ೧

ಬಿಲ್ಲಪಿಡಿದರಿವರೆಲ್ಲರು ಬಿಲ್ಲಾಳೆ
ಬಿಲ್ಲಪಿಡಿದ ಬಸವ
ಬಿಲ್ಲ ಪಿಡಿದು ತುಂಬ ತೆಗೆದು ಎಸೆವ ಗುರಿ
ಅಲ್ಲಮಪ್ರಭು ಬಲ್ಲನು ೨

ಬಲ್ಲವರೆಲ್ಲರು ಕಲ್ಲಲಿಡಿಸಿಕೊಂಡು
ಮಲ್ಲಿನಾಥನ ಭಜಿಸಿ
ಎಲ್ಲರಿಗಿಷ್ಟವ ತಂದೆನು ಗುರುಸಿದ್ಧ
ಮಲ್ಲಿಕಾರ್ಜುನ ಬಲ್ಲನು ೩

ಒಂದುಂ ಸಾವಿರ ಸಾವಿರ ಒಂದುಂ ಲಕ್ಷವು
ಒಂಬತ್ತನಾಲ್ಕು ಲಕ್ಷ ಇಲ್ಲಿ
ಸಂದಣಿಸುತ ಬಂದುಂ ನಿಂದಿಹ ಶರಣರಾ
ನಂದವನೇನೆಂಬೆನುಂ ೪

ಇದೆ ಕಡೆಯಾಟವು ಇದೆ ಕೈಲಾಸವು
ಇದೆ ಬಂದ ಬಸವ ನೋಡಿ
ಇದುಂ ಕಾಶಿಯುಂಪುರವಿಶ್ವೇಶನಿಂತೆಂದುಂ
ಕಡಿದ ಕೈ ಸಾರುತಿದೆ ೫

೪೭

ರಾಗ ॥ ಭೂಪಾಳಿ

ಎನ್ನನೇತಕೆ ತಂದ್ಯಯ್ಯ ಗುರುವೆ ಮಡಿವಾಳ
ನಿಮ್ಮ ಮರೆದಿಹ ನರರಿಗೆನ್ನ ಒಪ್ಪಿಸಿದಯ್ಯ
ಇನ್ನು ಈ ಹೇಸಿಕೆಯೆನ್ನುತ್ತ ಇರಲಾರೆ
ಚೆನ್ನ ನೀ ಗುಟ್ಟುಹೇಳೊ ಗುರುವೆ ಎನ್ನನೇತಕೆ ತಂದ್ಯಯ್ಯ ॥ ಪಲ್ಲ ॥

ಸೊಕ್ಕಿದವರನುಂ ಸೀಳ್ದು ಭಕ್ಷಿಸುತ
ರಣಭೂತಕಿಕ್ಕುತ ಉಣಿಸುತ
ರಕ್ಕಸರ ಪಡೆಗಳನುಂ
ಒಕ್ಕುತ್ತ ತೂರುತ್ತ ಗಟ್ಟಿಯುಂ ಅಳಿವುತ್ತ
ಪಟ್ಟದರಸೆಂದುಂ ತಂದೆ ಗುರುವೆ
ಚಿಕ್ಕ ಚೆನ್ನಬಸವೇಶನ
ಚಿಕ್ಕಚೆನ್ನಬಸವೇಶನವರಾಳಿನಾಳೆಂದುಂ
ಚಿಕ್ಕಚೆನ್ನಮಲ್ಲೇಶನವರಾಳಿನಾಳೆಂದುಂ
ಭಕ್ತರಿಗೆ ಭೃತ್ಯನಾಗೆಂದೆನ್ನ ತಂದ್ಯಯ್ಯ
ಕರ್ತುವಂ ಕಾಣೆ ಕಬ್ಬಟ್ಟೆಗಳೊಳಗೆ ಇರಲಾರೆ
ಕರ್ತು ನೀನಹುದುಂ ಹೇಳೊ ೧
ಗುರುವೆಯೆನ್ನನೇತಕೆ ತಂದ್ಯಯ್ಯ

ಸಿದ್ಧರಾಮಯ್ಯತಂದೆಯುಂ ಮಗನುಂ ನೀನೆಂದುಂ
ರುದ್ರಕಂಕಣವ ಕಟ್ಟಿದೆಯಯ್ಯ
ಕರಿವೀರಭದ್ರಂಗೆ ಕಿರಿಯಾತನೆಂದೆನ್ನ
ತಂದ್ಯಯ್ಯ ಸಿದ್ಧಬಸವೇಶ ತಂದೆ
ಗುರುವೆ ಚಿದ್ರೂಪನೆಂದೆಂಬರೊ

ಚಿದ್ರೂಪನೆಂದೆಂಬ ನಾಮ ನಿಮಗೇಕಯ್ಯಾ
ರುದ್ರಪಶುಪತಿಯೆಂಬ ನಾಮ ನಿಮಗೇಕಯ್ಯಾ
ಕಾಲೊಳೊದವಂಗೊಲಿದನೆಂಬ ನಾಮವು
ನಿಮಗೆ ನೀನು ಚಿದ್ರೂಪನಹುದೊ ಹೇಳೊ
ಗುರುವೆಯೆನ್ನನೇತಕೆ ತಂದ್ಯಯ್ಯಾ ೨

ಕರಿಯಜಿಚರ್ಮಾಂಬರನು ಧರೆಗಿಳಿದ ಸುದ್ದಿಯು
ಸುರರು ದುಂದುಭಿ ಶಂಖ ವಾದ್ಯಗಳು
ಭೋಂಕರಿಸಿ ಮೆರೆದಿರ್ದ ಅಮರಗಣತಿಂಥಿಣಿಗಳಂ ನೋಡೊ
ಕರುಣಿ ಗುರುಸಿದ್ಧರಾಮ
ಗುರುವೆ ಶರಣ ಚೆನ್ನಬಸವೇಶನ
ಶರಣ ಚೆನ್ನಬಸವೇಶನವರಾಳಿನಾಳೆಂದು
ಶರಣ ಚೆನ್ನಮಲ್ಲೇಶನವರಾಳಿನಾಳೆಂದು
ಶರಣರಂ ತೊತ್ತು ತೊತ್ತಿನ ಮಗನು ತೊತ್ತೆಂದು
ಗುರುಬಸವಲಿಂಗ ತಂದೆ
ಗುರುವೆ ಎನ್ನನೇತಕೆ ತಂದ್ಯಯ್ಯಾ ೩

೪೮

ರಾಗ ॥ ಶಂಕರಾಭರಣ

ಆತನೊಲಿದನೆಂಬ ಮಾತಿನಮಾಲೆ ಯಾಕೊ
ಪ್ರೀತಿದೋರುವಾತನೆ ಪ್ರಿಯವಿಲ್ಲದೆ ॥ ಪಲ್ಲ ॥

ಒಲಿಯೆಂಬವರನೊಲ್ಲ ಒಲುಮೆಯು ಬಲ್ಲನಲ್ಲ
ಒಲ್ಲೆನೆಂದೆಂಬವರ ತಾನೊಲಿದು ಕೂಡಿ
ಅಲ್ಲಮನು ಇಂತವನು ಹಂಲುವನುಂಜರು ಕೇಳಿ
ಎಲ್ಲಂಗನೆಂದೆಂಬ ನಾಮ ಏಕೆ ಬಂದಿತು ೧

ಆದರೆ ಹೋದರೇನೆಂಬ ಬಿದರೊಳಾಡುವನು
ಆದಿಕೂಡಲಸಂಗ ಕಬಾಟಲಿಂಗ
ಬಿರಿದ ಕಾಲೊಳು ಕಟ್ಟಿ ಬೀದಿಬೀದಿಯೊಳೆಲ್ಲ ೨

ಹರುಷದಿ ತಿರಿದುಂಬ ಮರುಳಿನಂತೆ
ಪರಮಭಕ್ತರ ಪ್ರಿಯ ಪಶುಪತಿಎಮ್ಮಯ್ಯಾ
ಆರಸು ಕೂಡಲಸಂಗ ಅಪ್ರತಿಮಲಿಂಗ ೩

೪೯

ರಾಗ ॥ ಹಿಂದೋಳ ವಸಂತ

ಎಲ್ಲಿಲಾಂ ಯೆಲ್ಲ ಲಾಲೇ
ಜಲ್ಲಿಮಾಂ ಯೆಲ್ಲ ಲಾಲೇ
ಆಹಾ ಯೆಲ್ಲ ಲಾಲೇ
ಎಲ್ಲಿ ಲಾಂ ಯೆಲ್ಲ ಲಾಲೇ ॥ ಪಲ್ಲ ॥

ಕಂಡೆನೆನ್ನಯಂ ಭವತಿವೀರಮಾ
ರ್ತಾಂಡ ಸುಗುಣಕರಂಡನ
ಕಂಡೆ ಹರಿಯಜಕಾಂಡಲಾಮರ
ಹಿಂಡುದೈವದ ಗಂಡನ
ಕಂಡೆ ಪರಸಮಯಾಬ್ಜವರ ವೇ
ತಂಡ ನಿತ್ಯಪ್ರಚಂಡನ
ಕಂಡೆ ಖಂಡಿತ ಕುಸುಮಶರಕೋ
ದಂಡ ಸುಗುಣಕರಂಡನ
ಹೋಯೆಲ್ಲ ಲಾಲೆ
ಯಲ್ಲಿಲಾಂ ಯೆಲ್ಲ ಲಾಲೆ ೧

ಮೆಟ್ಟಿ ಅಂಧಕಸುರನ ಕಾಮನ
ಸುಟ್ಟುರುಹಿ ಬೊಟ್ಟಿಟ್ಟನ
ದಿಟ್ಟಿ ವ್ಯಾಘ್ರಾಸುರನ ಚರ್ಮವ
ನುಟ್ಟಿ ದುರಿತಘರಟ್ಟನ
ತೊಟ್ಟು ಶಿರಮಾಲೆಗಳನುರದಲಿ
ದಟ್ಟಿಸಿ . . . ರಂಗನಾ
ಮುಟ್ಟಿ ಪೂಜಿಸಲಿಷ್ಟಸಿದ್ಧಿಯಂ
ಕೊಟ್ಟು ರಕ್ಷಿಪದೇವನ
ಹೋ ಯೆಲ್ಲ ಲಾಲೆ
ಯಲ್ಲಿ ಲಾಂ ಯೆಲ್ಲ ಲಾಲೆ ೨

ಅರುಣಶಿಖಿ ಸಿ . . . ರಯ್ಯನ
ತರುಣ ಚಂದ್ರಾಭರಣನ
ಪರಮಭಕ್ತರ ಹರಣದೊಡೆಯನ
ಕರಣಗಣಗುಣದೂರನ
ಕರುಣಿ ನಿಜಗುರುಸಿದ್ಧಶಾಂತನ

ಚರಣಪದ್ಮ ವಿರಾಗನಾದಿ
ಪರವಶದೊಳನವರತವಿರುತಿಹ
ಪರಮಸುಖವೆನಗೆಂದಿಗಹುದೊ
ಹೋ ಯಲ್ಲ ಲಾಲೆ
ಯಲ್ಲಿ ಲಾಂ ಯೆಲ್ಲಲಾಲೆ ೩

೫೦

ಸಾಂಗತ್ಯ

ಶ್ರೀಗುರುಸಂಗಮೇಶ್ವರಲಿಂಗ ಸಲಹುವ
ಯೋಗದ ಶಶಿ ಬೆಳೆವುದನು
ಜೋಗಿಗಳಾಗಿಹರಲ್ಲದೆ ಕಾಣರು
ಯೋಗಕ್ಕೆ ಸಿಲುಕದ ಶಶಿಯು ೧

ಭಕ್ತರಪ್ರೀಯನು ಭವರೋಗವೈದ್ಯನು
ಮುಕ್ತಿದಾಯಕ ಮುನಿವಂದ್ಯ
ಕರ್ತುತಾನೊಬ್ಬನೆ ಏಕೋದೇವನುಯೆಂದು
ಮರ್ತ್ಯದೊಳಗೆ ಸಾರಿದೆನು ೨

ಅಜ ಹರಿ ರುದ್ರರಗಂಡಾದಿಮೂರ್ತಿಯು
ಹೊಗಳುವರೆನ್ನಳವಲ್ಲ
ಅಗಣಿತಮಹಿಮ ಅನಾದಿ ಜಂಗಮ ತನ್ನ
ಹೊಗಳುವ ತಾನೆ ತಾನೆಂದು ೩

ಆದಿಯೆ ಬಸವ ಅನಾದಿಯೆ ಜಂಗಮ
ಆದಿ ಅನಾದಿ ಸಂಗಯ್ಯ
ಸಾಧಕರೆ ಸಟೆಯೆಂದು ಷಣ್ಮುಖದಿಟವೆಂದು
ಹಾಡಿ[ನಾ ದಣ್]ದಂತೆ ಹಾಡುವೆನು ೪

[ಎತ್ತಿ]ಬಬಜಿ ಬಸವದಂಡೇಶ ಧನುವ ಪಿಡಿದಾ
ಬತ್ತಳಿಕೆ ಅಂಬುಗಳ
ಭೋರನೆ ಪಿಡಿದೆಚ್ಚು ಮರವೆಯುಪುರವನು
ಸೂರೆಯಾಡಿದರೆಮ್ಮವರು ೫

ಬಡಗಣದೇಶದಿಂದ ಬ್ರಾಹ್ಮಣ[ನ ವರ್]ರಾಣಿ
ಗುಂಡುಗುಡಿಸಿ ಆರ್ಭಟಿಸಿ ನರರ

ಸಿಡಿದಲೆದೆಗೆದು ಘೋಳಿಡಿಸಿ ಲೋಕದೊಳಿಂದು
ಅರಸಿನಿಂದಳ ಮಹಲಕ್ಷುಮಿ ೬

ಗುರುವರಿಯದ ನರರನು ಗುರುವೆಂಬರ
ಕರವ ಕಡಿದಳು ಪಾತಕರ
ಗುರುಗೋಹೇಶ್ವರನಲ್ಲದೆ ನರಗುರುವೆಂಬ
ನರಕಿಗಳ ಕೆ[ತ್ತ್ರಾವ]ಬಾಚಿದೇಕೊ ೭

ಅರಹುಗಳ ಮರೆದೆಲ್ಲ ಕುರುಹುಗಳ ನೋಡುತ್ತ
ಬರಿಯ ಬೊಮ್ಮದ ಮಾತ ನುಡಿವ
ಶರಣರ ಹಳಿದ ನರಕಿಗಳೆದೆಗೊಂತ
ಅರಸು ತಂದನು ಆದಿಬಸವ ೮

ಕುರುಹೆಂಬುದಾಕಾರ ಅರುಹೆ ನಿರಾಕಾರ
ಅರುಹಿಲ್ಲದ ಕುರುಹುಂಟೆ
ಕುರಹನೋಡುವ ನರಗುರಿಗಳು ಕೇಳಿರೊ
ಕುರುಹಿಲ್ಲ ಕೂಡಲಸಂಗ ೯

ಕುರುಹಿಲ್ಲ ನೋಡುವವೆರಡು ಕುರುಹಿನ ಕಣ್ಣವೇಕೊ
ಅರುಹನೋಡುವ ಕಂಗಳಿಲ್ಲ
ಅರುಹಿನವರಿಗಲ್ಲದೆ ಇಲ್ಲ ಕುರಿಗಳಿರ
ಕುರುಡ ಕನ್ನಡಿವಿಡಿದ ಪರಿಯು ೧೦

ಕಾಯವಿಲಾಸವೆಂದೆನಿಸಿ ಪುಟ್ಟಿದ ನಮ್ಮ
ನೀಲಕಂಠನು ಭಕ್ತರಲ್ಲಿ
ಕಾಯಕವೆ ಕೈಲಾಸವೆಂದು ಸಾರಿದೆ ನಮ್ಮ
ದೇವ ಭಕ್ತರ ಭೃತ್ಯನೆಂದು ೧೧

ಭಕ್ತನೆ ಕೈಲಾಸ ಭಕ್ತನೆ ಕಾವೇರಿ
ಭಕ್ತನೆ ನಿತ್ಯ ನಿರ್ವಾಣಿ
ಭಕ್ತನೆ ಕರ್ತೃ ತಾನೆಂದು ಸಾರಿದನಮ್ಮ
ಭಕ್ತರ ಲೆಂಕ ನಾನೆಂದು ೧೨

ಲೆಂಕರಲೆಂಕನು ಶಂಕೆಯಿಲ್ಲದೆ ಪೊಕ್ಕು
ಶಿಂಶುಮಾರನ ಕೊಂದ ಕೊಲೆಯು
ಅಂಕದ ಕಣ ಮರ್ತ್ಯಲೋಕವ ಒಳಪೊಕ್ಕು ೧೩
ಬಿಂಕಕಾರರ ಸೀಳ್ವನೆಂದು

ಆಡಿಸಿದಂತೆ ನಾನಾಡುತಿಹೆನು ಕೇ
ಳಾದಿ ಕೂಡಲಸಂಗ ನಮ್ಮ
ಮೇದಿನಿಯೊಳಗಿಹ
ನರಕಿಗಳನು ತರಿದಾಡಿಸುತಲಿ ಬಂದೆನಮ್ಮ ೧೪

ಕಲ್ಲಶಿಲೆಯೊಳು ಮಾತಾಡುವಂದದಿ
ಭಕ್ತರಲ್ಲಿಹ ನಮ್ಮಯ್ಯ ತಾನು
ಹುಲ್ಲು ಮನುಜರನು ಗೆಲ್ಲುವ ತೆರನ . . . .
. . . . . . . .
. . . . . . . .
ದಲ್ಲಿ ತೋರಿದನು ನಮ್ಮಯ್ಯ ೧೫

ಗೊಲ್ಲಾಳಗೊಲಿದಯ್ಯ . . . ರಿಯಲಿ
ಳಲ್ಲಿ ಕೊಲಿಸಿದ ತಂದೆಯನು
ವಲ್ಲಭೆ ಎನ್ನ ಪತಿಯು ಕೊಂದೆಯೆನಲಾ
ಗಲ್ಲಿ ತೋರಿದ ಹಿಕ್ಕೆಯೊಳಗೆ ೧೬

ಕಣ್ಣಪ್ಪಗೊಲಿದಯ್ಯ ಕಣ್ಣ ತೆಗೆದು ತನ್ನ
ಕಣ್ಣೆಗಿಂತೆಂದು ಹೇಳಿದನು
ಉನ್ನಂತಲುರಿಲಿಂಗ ಕಾಳಹಸ್ತಿಲಿಂಗವು
ಕಣ್ಣಪ್ಪ ಸಾರಕುವರನು ೧೭

ಕಲಿ[ಕಾಮ] ಗೆಲವಿತ್ತು ನಮ್ಮಯ್ಯ
ಕಲಿಭಕ್ತನೆಂದೆನಿಸಿದನು
ಒಲಿದು ತನ್ನೊಳು ತಾ ದೀಕ್ಷೆಯಿತ್ತಿಹದೊಂದ
ಗೆಲುವ ನಾನೆಂತು ಬಣ್ಣಿಪೆನು ೧೮

ಕಾಳಿದಾಸಂಗೊಲಿದಯ್ಯ ಮೂಗಳಕಣ್ಣ
ಹೇಳಿತ್ತ ಉಮೆಯರರಸನು
ಹೇಳುತ್ತ ಕೇಳುತ್ತ ಆಳುತ್ತ ಭಕ್ತಿಯ
ಲೀಲೆಯೊಳಾಡುವ ಲಿಂಗ ೧೯

ಕಾಣಬಾರದು ನಮ್ಮ ಕರಿಯ ಬಸವ ನಿ
ರ್ವಾಣ ನಿತ್ಯಾನಂದರೂಪ
ಜಾಣ ಜಗಖ್ಯಾತ ಅನಾದಿಜಂಗಮ ಆ
ಪ್ರಾಪ್ತ ಚಿಂತಾಮಣಿದೇಕೊ ೨೦

ತುರುಕದಂಡೆತ್ತಿ ಬಂದಿತು ಧರೆಯೊಳಗೆಲ್ಲ
ನರಕಿಗಳಿರ ಕೇಳಿ ನೀವು
ಅರಸು ಬಸವರಾಜನ ಕೂಡಿ ಬಂದಿತು
ಕರಿಯ ಬಾಬಯ್ಯ ತುರುಕರು ೨೧

ಬ್ರಹ್ಮಾಂಡವನಾವರಿಸಿ ಬಂದಿತು ಕೇಳಿ
ಧರ್ಮಸ್ವರೂಪನ ದಂಡು
ನಮ್ಮಯ್ಯ ಚೆನ್ನಬಸವರಾಜನು ಕೂಡಿ
ಚೆನ್ನಯ್ಯ ಮಡಿವಾಳಯ್ಯಗಳು ೨೨

ತುರುಕಹದಿನೆಂಟು ನೇಜ್ಯವು ಕೂಡಿಬಂದಿತು
ಹರುಷದಿ ವಿದ್ಯನಗರಿಗೆ
ಶರಣು ಬಲವು ಕೂಡಿ ಬಾಲಿಭಂಡಾರಕ್ಕೆ
ನರಕಿಗಳನು ಬಲಿಯಿತ್ತು ೨೩

ಭಂಡಾರವ ಸೂರೆಗೊಂಡು ಭಕ್ತಿರಸ
ವೆಂಬ ರಾಮೇಶ್ವರದೊಳಗೆ
ಖಂಡೆಯವಂ ತೊಳೆದಿಹ ನಮ್ಮ ತುರುಕರಾ
ನಂದವನೇನ ಬಣ್ಣಿಪೆನು ೨೪

ಈ ಪರಿಯಲಿ ದಂಡು ಧಾಳಿಮಾಡಿತು ನಮ್ಮ
ಆ ಪರಬ್ರಹ್ಮವ ಕೂಡಿ
ಆ ಪರಬ್ರಹ್ಮವೆ ಆ ಕುವರನೆಂದು ನಾ
ನೀ ಪರಿಯಲಿ ಸಾರಿದೆನು ೨೫

ಡಿಳ್ಳೈಸಿತು ಎದೆಯೊಳ್ದಲ್ಲಣಗೊಂಡು
ಡಿಳ್ಳಿಯಪಾಚ್ಛವ[ನ]
ಕಲ್ಯಾಣದಪುರಧೀಶ ಭಕ್ತರಿಗಿದು
ಕಲ್ಲೇಶಲಿಂಗದ ವಾಕ್ಯ ೨೬

ದಂಡೇಶನೆಂಬ ಧನುವ ಪಿಡಿದನು ಮು
ಕ್ಕಂಡಿಕೆ ಅಂಬನು ಹೂಡಿ
ತುಂಬತೆಗೆದು ಪಿಡಿದೆಸೆಯೆ ನಮ್ಮಯ್ಯ ಭೂ
ಮಂಡಲ ತಲೆಕೆಳಕಾಯ್ತು ೨೭

ಏಳುನೂರೆಪ್ಪತ್ತೇಳು ಇಂದಿಗೆ ಸರಿ
ಧಾಳಿ ಬಂದಿತು ರಕ್ತಾಕ್ಷಿ

ಧಾಳಿಯಾಯಿತು ಲೋಕಾದಿ ಲೋಕಂಗಳ
ಖೂಳರ ಹಣೆಬರ ತೊಡದು ೨೮

ತೋರಣಗಟ್ಟಿನಿಂದಳು ಮುಹುಮಾಯಿ ಕಾ
ವೇರಿ ಮಧ್ಯದೊಳ್ನಿಂದು
ಕಾರ್ಮುಗಿಲಂದದಿ ಉಡುಸೆಯುಪ್ಪರೆಗಟ್ಟಿ
[ತೋರಿದ]ನು ಧರೆಯೊಳಗೆ ೨೯

ಹುಸಿಯೆಂದೆನದಿರಿ ಮುಸಿಮುಣ್ಣಾದೀರಿ
ವಿಷದಪ್ರಳಯ ಬಂದಿತೆಂದು
ಅಸಮುಭಕ್ತನ ನೀಲಲೋಚನೆಯುಮ್ಮ
ಕಸನ ಗುಡಿಸಿ ಕಾವೇರಿಯೊಳು ೩೦

ಪುಸಿಯಲ್ಲ ಶಿವಸಿದ್ಧರಾಮೇಶನಾಣೆ
ಪುಸಿಯಲ್ಲ ಶಾಂತೇಶನಾಣೆ
ಬೆಸನಕೊಂಡಿಳಿದಳು ಬೆನಕನಚೌತಿಯೊ
ಳಸಮಾನದ ದುರ್ಗಿಯೆಂದು ೩೧

ಲೆಗ್ಗೆಮಾಡಿದರೆಮ್ಮಯ ಶರಣರುಗಳು
ಸುಗ್ಗಿ ಶೂಲವ ನೆಟ್ಟೀಗ
ಸದ್ಗುರು ಚೆನ್ನಬಸವರಾಜನೆಂದೆಂಬ
ಅಗ್ಗಳಿಕೆಯ ಶೂಲದ ಹಬ್ಬ ೩೨

ಮುಲ್ಲಗಂಬವ ನೆಟ್ಟರು ಮುಚ್ಚರಿಸಿದ
ಹುಲ್ಲರುಗಳ ಸ [ದ್]ದು
ಅಲ್ಲಮುನಾಳುಗಳೆಲ್ಲರು ಕಣದಲಿ
ನಿಲ್ಲದೆ ಕಡಿದಾಡಿದರು ೩೩

ಮುರವೆಯ ಮುದದಾನೆಗೆ [ಪಿಡಿ]ದಿಹದೊಂ
ದರುಹಿನ ಅಂಬುವದೇಕೋ
ಗುರುಭಕ್ತರಿಗೆ ತಂದ ಕೆ . . . ಅಟ್ಟಿಯು
ಕಿರುಕಣ್ಣಕೆಯ ಗೋಪ್ಯವಿದೇಕೊ ೩೪

ಭಾಳಲೋಚನನ ಭಕ್ತರ ಹಳಿದವರನು
ಘೋಳಿಡಿ[ಸು]ತ ಬಂದಿಹ
ಕಾಳಬಸವನೆಂಬ ಕೋಳಿ ಕೂಗಿತು
ಬೆಳಗಾಗಿ ತಾವರೆ ಅರಳಿದವು ೩೫

ಬಿಳಿಯ ಕೋಳಿಯ ಧ್ವನಿಗಳು ನಮ್ಮವರೆಲ್ಲ
[ಘಳಿಲ]ನೆಯೆಚ್ಚತ್ತಿಕೊಂಡು
ಅರುಣ ಉದಯವಾಗಿ ಶರಣರುಗಳ ಕೂಡಿ
ಅರಸು ನಿಂದನು ಕಾಳಗಕೆ ೩೬

ಅರುಣನುದಯ ಪೌರ್ಣಮಿಯ ಮಂಗಳವಾರ
ಅರಸಿಗೆ ಪಟ್ಟ ಕಟ್ಟಿದುದು
ಧುರಧೀರ ವೀರ ವಿಕ್ರಮ ಚೆನ್ನಬಸವನು
ನರಕಿಗಳನು ಸೆರೆವಿಡಿದು ೩೭

ನರಕಿಗಳನು ಸೆರೆವಿಡಿದು ನಮ್ಮವರನು
ಹರುಷದಿಂವಲಿ ಕೊಂಡಾಡಿ
ಕರಿಯಬಸವೇಶ ನಮ್ಮ ಕರಿಮುಖ ವೀರೇಶ
ಗಿರಿಸುತೆ ಅರಸನಕುವರ ೩೮

ಕುರಿಗಳ ತರಿದರು ಸೆರೆಗಳ ಹಿಡಿದರು
ಅರುಹುಳ್ಳ ಶರಣರಾನಂದ
ದೊರೆರಾಯ ವೀರವಿಕ್ರಮ ಚೆನ್ನಬಸವನು
ಶರಣುಹೊಕ್ಕವರನು ಕಾಯ್ದ ೩೯

ಕಟ್ಟಿತಂದರು ಖಂಡವಕೊಯಿದವರನು
ಉಪ್ಪುಳಿಯೊಳು ತಿನಿಸುವರು
ಚಪ್ಪರಿಯೆಂದು ಕಾದುಕ್ಕಿನಗಟ್ಟಿಯ
ನೆತ್ತಿಯೊಳಿಟ್ಟು ಕೊಲುತಿಹರು ೪೦

ಇದು ಗುರುಲಿಂಗವು ಇದು ಜಂಗಮವೆಂ
ದಧಮರ ಹಿಡಿತಂದೀಗ
ಗರಗಸದಲಿ ಕೊರೆದಾಡುತಿಹರು ನಮ್ಮ
ಗುರುಬಸವೇಶನಾಳುಗಳು ೪೧

ಇದು ಪಾದೋದಕ ಇದು ಪ್ರಸಾದವೆಂ
ಬಧಮರ ಶಿರಗಳ ಕಡಿಕಡಿದು
ಗುಂದಿಗೆಯೊಳಗೆ ಬೆನ್ನತಡವುತಲೆದೆಯನು
ಮದವರು ಗುಂಡಿಗೆ ಮುರಿಯ ೪೨

ಕುಟಿಲಜಂಗಮ ಕೋಲಾಹಲ ಬಸವನೆಂಬ
ಘಟಿ ಚಮ್ಮಟೆಗೆಗಳೆತ್ತಿ

ಪಟುಭಟರುಗಳೆಲ್ಲರುಯೆಂತ್ರಿ, ಹೊಯಿದರು
ಕೊಡಲಿಗಳನು ಹಿಡಿತಂದು ೪೩

ಕೊಟ್ಟ ಕಾಲನು ತರಿದರು ಕೊಂಡವರನು
ಮೆಟ್ಟಿತರಿದರು ಕೈಗಳನು
ಅಷ್ಟದಿಕ್ಕಿಲಿ ಭೂತಕೆ ಉಣಲಿತ್ತರು
ಪಟ್ಟದರಸಿನಾಳುಗಳು ೪೪

ಆದಿ ಅನಾದಿ ಜಂಗಮವರಿಯದವರ
ವಾದಿಗಳನು ಹಿಡಿತಂದು
ಕಾದುಕ್ಕಿದ ಸೀಸವ ಉಣಲಿತ್ತರು
ಸಾಧಕರಿಗೆ ಶೋಧವೆಂದು ೪೫

ಭುಜಬಲಿಷ್ಠರುಗಳ ಕೊಲುತಿಹ ನಮ್ಮ
ರಾಜಶೇಖರನಾಳುಗಳು .
ರಾಜರಾಜರಗಂಡ ಚೆನ್ನಬಸವನೆಂಬ
ದೇವದುಂದುಭಿ ಮೊಳಗಿದವು ೪೬

ಕಾಣೆನೆಂಬವ ಗುರು ಕಾಣೆನೆಂಬವ ಲಿಂಗ
ಕಾಣೆನೆಂಬವ ಜಂಗಮವು
ಕಾಣಬಾರದುಯೆನ್ನ ಪ್ರಾಣವಲ್ಲಭನನು
ಕಾಣೆನೆಂಬವ ಕಂಡಿಹನು ೪೭

ಆ ಗುರು ಲಿಂಗ ಜಂಗಮವ ಕಂಡವರಿ . . . .
. . . ಪಾದೋದಕವೆಲ್ಲಿ
ಆ ಪಾದೋದಕವನು ಕೊಡುವ ನಮ್ಮ
ಆ ಪರಬ್ರಹ್ಮನಿರ್ವಾಣಿ ೪೮

ಪಾದೋದಕ ಪರಬ್ರಹ್ಮ ಪ್ರಸಾದವು
ಆದಿಗಣಂಗಳು ಕೂಡಿ
ಸಾಧಕರಿಗೆ ಸಾಧ್ಯವಲ್ಲ ಕೂಡಲ ಚೆನ್ನ
ಅದಿ ಅನಾದಿ ಸಂಗಯ್ಯ ೪೯

೫೧

ಮಾಸ್ತಿವಚನ

ಆದಿ ಮಡಿವಳನಿತ್ತ ಆ ಲಿಂಗದೋಲೆಯು
ಆದಿ ಭಕ್ತರಿಗೆ ಉಸುರಿದೆ
ಬಾಧೆಯು ಮಾದಿಗರಿಗರಿದು ಅಳವಲ್ಲ ೧

ಏಕೋದೇವನೆ ದೇವ ಏಕೋಲಿಂಗವೆ ಲಿಂಗ
ಏಕೋಲಿಂಗವೆ ಜಂಗಮು ಗುರುರಾಯು
ಮಿಕ್ಕಿನ ಪೇತುಂದೈವಗಳ ಸುಡ ಬಂದೆ ೨

ಹುಟ್ಟಿಸಿದವ ನಂಜುಂಡ ಹುಟ್ಟಿದವ ನಾರಾಯಣ
ಹುಟ್ಟಿಸಿದವಗೆ ಹುಟ್ಟಿದವ ಸರಿಯೆಂಬ
ದೂಷಕರ ಮೆಟ್ಟಿ ನಾಲಿಗೆಯು ಕೀಳಬಂದೆ ೩

ಕ್ರಿಯೆ . . . ರಕ್ಷಾಕ್ಷಿಗೆ ರಸತುಂಬಿ
ನೆತ್ತರ ಶಿವರಾತ್ರಿ ಶಿವಯೋಗದಾ
ನಂದಕೆ ಭಕ್ತರಿಗೆ ಭೃತ್ಯಮಗ ಬಂದೆ ೪

ಇಷ್ಟಲಿಂಗವ ತಂದ ಬೆಸ್ತನೆಂಬುದನರಿಯದೆ
ವಿಸ್ತರಿಸುವರಿಲ್ಲ ಧರೆಯೊಳು
ನಮ್ಮ ಶರಣರ ತೊತ್ತಿನ ಹಳೆಯುಮಗ ಬಂದೆ ೫

ಆದಿಯು ಕಾಣದೆ ವೇದವ್ಯಾಸನು ಕರವ
ಹೋಗಾಡಿಕೊಂಡ ಕಥೆಗೇಳಿ
ನಮ್ಮಯ್ಯ ಆದಿಯು ತೋರಿ ಕರವಿತ್ತ ೬

ಆದಿಯು ಕಾಣದೆ ಬಾಧೆಗೆ ಒಳಗಾಗಿ ಹರಿ
ಆದಿ ಅಲ್ಲಮನ ಮಗ ತಂದ
ಸುದ್ದಿಯು ಸಾಧಕರಿಗರಿದು ಅಳವಲ್ಲ ೭

ಈ ಕರ ಕರವಲ್ಲ ಆಕರವನಿತೆನ್ನ
ಆಕಾರವಿಲ್ಲದಭವ ವಿಶ್ವೇಶನೆ ೮
ನೀ ಪಾಲಿಸೆನಗೆ ಕೃಪೆಯಿಂದ

ಕೇಶವ ಘನವೆಂದು ವ್ಯಾಸನ ಕೈಯೆಂದು
ಆ ಪರಮನೊಳಗೆ ನುಡಿದ ವೇದವ್ಯಾಸ ೯
ದೂಷಕರಿಗೆತ್ತಿ ತೋರೆಂದು

ವ್ಯಾಸನ ಕರವೆತ್ತಿದೆ ವೇಷಧಾರಿಗಳೆಂದು
ದೂಷಕರ ಗಂಡ ಭೂತೇಶ ಅನಿಮಿಷನು
ಆ ಪರಮು ಬಂದ ಧ್ವಜವೆತ್ತಿ ೧೦

ಮಂಗಳವಾರದದಿವಸ ಮಾಂಗಲ್ಯವಾಯಿತ್ತು
ಗಂಗಾಧರನಾಣೆ ಗೌರಿಯು ಒಡಗೂಡಿ
ಸಂಗಯ್ಯ ಬಂದ ಕತವಿದೆ ೧೧

ಕಾಡುಮಂದಿಗಳೆಲ್ಲ ಕಾದಿ ಆಡುತಲಿವೆ
ಮೇದಿನಿಯೊಳೆಲ್ಲ ಅಳಿದವು ಕಾಳಿಯು
ಬೋಳೇಶ ಸಿದ್ಧ ನಗುತಿರ್ದ ೧೨

ಹಂದಿಗಳೆಲ್ಲವು ಅಳಿದು ಅಂದಾ . . . ತೆಂದು
ಸಂದ ಪ್ರಮಥಾದಿ ಗಣ ಸಹಿತ ಉತ್ತರಕೆ
ನಂದಿವಾಹನನು ನಡೆತಂದ ೧೩

ಉತ್ತರದೇಶದಿಂದ ಪಶ್ಚಿಮಕೆ ಬಂದರು
ಸತ್ಯಗಣಂಗಳೊಡಗೂಡಿ ಚೆನಮಲ್ಲು
ದಕ್ಷಿಣಮುಖವಾಗಿ ನಡೆತಂದ ೧೪

ದಕ್ಷಿಣದ್ರಾವಿಡದೇಶ ಮುಕ್ಕಣ್ಣಗುರುಸಿದ್ಧ
ಚಿಕ್ಕಬಸವೇಶನೊಡಗೂಡಿ ಬಂದರು
ದಕ್ಷಿಣ ಕಾವೇರಿ ಕೈಲಾಸ ೧೫

ಚಿನ್ನದ ಕಳಶವಿಟ್ಟು ಚೆನ್ನವೀರಣ್ಣಗೆ
ಗುಮ್ಮಳಪುರಕೆ ಗುರುಬಂದ ಪ್ರಭುರಾಯ
ಚೆನ್ನಬಸವೇಶನೊಡಗೂಡಿ ೧೬

ಗೂಗೆ ಹುಯಿಲಿಕ್ಕಿದವು ಗುಮ್ಮಳಪುರದೊಳಗೆ
ಬೇಗೆಯುನಿಕ್ಕಿದರು ನಮ್ಮ ಶರಣರು ಕರ್ಮದ
ಕಾಗೆಯುಗೂಡ ಅಳಿದರು ೧೭

ಹಾದರರದ ಕಥೆಗಳ [ಹೇಳುತ] ಪರದೇವತೆಗಳನು
ಓದಿಸಿ ಕೇಳುವ ಹೊಲೆಯರು ನಮ್ಮ ಶರಣರ
ಆದಿಯ ಕಾಣಲರಿಯರು ೧೮

[ವೇ]ದವನೋದುವ ಮಾದಿಗರೆಲ್ಲರು ಕೇಳಿ
ಮೂದೇವರಿಗೊಡೆಯು ಪ್ರಭು ತಂದ ಸುದ್ದಿಯು
ಸಾಧಕರಿಗಂದು ಅಳವಲ್ಲ ೧೯

ಇಚ್ಛೆಯನರಿದು ನರಕದುಚ್ಚಿಯ ಕುಡಿವರು
ಸತ್ಯವ ನುಡಿವವರು ಮುನ್ನಿಲ್ಲ ಸದ್ಭಕ್ತ
ಕರ್ತ ಬಸವೇಶ ಗುರುಸಿದ್ಧ ೨೦

ಸತ್ಯವ ನುಡಿವಂತ ಮುಕ್ಕಣ್ಣ ಕರಿವೀರ
ಸತ್ತು ಹುಟ್ಟುವರಿಗಳವಲ್ಲ[ದಧಮ]ರ
ತತ್ತನೆ ತರಿದಿಟ್ಟ ಗುರುಸಿದ್ಧ ೨೧

ತಾನೆಂಬ ತಂಬಟವು ನಾನೆಂಬ ಧ್ವಜವೆತ್ತಿ
ತಾನೆತ್ತಿ ನಡೆದ ಬಿರಿದಂಕ ಮಾಸಾಳು
ಸೂಳೆಯರು ಕೇಳಿ ಕೆಡಬೇಡ ೨೨

ತಂಬಟವ ಹೊಯಿದರು ಡೊಂಬಿಯನಿಕ್ಕಿದರು
ಶಂಭು ಶಂಕರನ ನುಡಿಗೇಳಿ
ನಂಬಿದ ಭಕ್ತಜನವೆಲ್ಲ ೨೩

ಕಾಗೆ ಹದ್ದ ನುಂಗಿ ಗೂಗೆ ಹುಯ್ಯಲನಿಕ್ಕಿ
ಗಾದೆಯ ನುಡಿದ ಬಸವಣ್ಣನಾಗಮವ
ಆದಿಯ ಕಾಣಲರಿಯರು ೨೪

ಹರನರಿಯದಂದೆ ಹದ್ದು ಕರ್ಮವೆಂಬುದೆ ಕಾಗೆ
ಧರ್ಮವೆಂಬ ಗೂಗೆ ಹುಯ್ಯಲಿಕ್ಕೆ ಆ ಹದ್ದ
ಆ ಕಾಗೆ ನುಂಗಿ ಅಳಿಯಿತ್ತು ೨೫

ಋಣಮಯ ಹೆಣಮಯ ಶಿವನಾಣೆ ಪುಸಿಯಲ್ಲ
ಬಣಗುಮಾನವರ ನೀವರಿಯಿರಿ ಮರವೆಯ
ಸುರೆಯುಮನೆ ಕುಡಿದು ಮಲೆತಿಹರಿ ೨೬

ಊರಿಗೆ ಹೋದಣ್ಣ ಊರತ್ತಲೆ ಬಯಲು
ನೀರಿಗೆ ಹೋದ ಹಿರಿಯಕ್ಕ ತಾ ಬಯಲು
ಮಾರಿಯ ಕಾಟ ಮನೆಯೊಳಗೆ ೨೭

ಈ ಬೆಳೆ ಕಣದಲ್ಲಿ ಈ ಬೆಳೆ ಕಣಜದಲಿ
ಈ ಬೆಳೆಯ ಹಗೆಯದೊಳಗಿರ್ದ ಹಾಗೆಲ್ಲ
ಕಾಗೆಮಾನವರು ಅಳಿದರು ೨೮

ಹಣವಿಗೆ ಖಂಡುಗರಾಗಿ ಹಣವಿಗೆ ಖಂಡುಗನೆಲ್ಲಂ
ಮನೆಯೊಳಗೆ ತುಂಬಿ ಉಣಲಿಲ್ಲ ಮಾನವರ
ಕಣೆದಾಟವೇಕೆ ಕುರಿಗಳಿರ ೨೯

ಕಾವೇರಿ ಮಧ್ಯದಲಿ ವೀರಬೊಬ್ಬೆಗಳಾದೊ
ವೀರಣ್ಣ ಬಂದ ವಿವಹಕ್ಕೆ ಉಚ್ಚಾಹಕ್ಕೆ
ಮಾರಾರಿಶರಣಮಗ ಬಂದ ೩೦

ಎಣ್ಣೆಯ ಹೊಳೆಯಲ್ಲಿ ಹಣ್ಣದವು ಕಾಳಗವು
ಚೆನ್ನವೀರಣ್ಣ ಮಡಿವಾಳಯ್ಯನ ಕಾಳೆಗವು
ಹಣ್ಣ . . . ಹಿರೂ ಜಗಕೆಲ್ಲ ೩೧

ಮಂಡಲವೆಂಬುದು ಕೊಂಡ ಕೊಂಡಪೆಂಬುದು ದೂಪ್ಯ
ಕೆಂಡವ ಪೊಕ್ಕು ಉರಿಲಿಕ್ಕೆ ನೀರೆದ್ದು
ಕೆಂಡವಡಗಿತ್ತು ಕೆಸರೆದ್ದು ೩೨

ಮಂಡಲದೊಳಗೊಬ್ಬ ಖಂಡೆಯಮ ಕಟ್ಟಿ
ಗಂಡುಗಲಿ ಬಿಬ್ಬಿಬಾಚರಾಜಯ್ಯಗಳು
ಖಂಡೆವ ಕಟ್ಟಿ ಮೆರೆದರು ೩೩

ತೊಲಗದ ಕಂಬವ ನೆಟ್ಟು ತೋರಣವ ಕಟ್ಟಿ
ಕಲಹಕ್ಕೆ ನಿಂದ ಕುರುಹಂದು ನಮ್ಮ ಶರಣರ
ಹಳೆಯರ ಹಳೆಯ ಮುಮ್ಮಗನೆಂದು ೩೪

ಒಣಗಿದ ಮರನೊಳಗೆ ಒಂದು ಸರ್ಪನು ಹೊರಟು
ಹೆಡೆಯೆತ್ತಿ ಆಡಿ ನಲಿಯಿತ್ತು ಆ ಸರ್ಪ
ಹಿಡಿವರ ಕಾಣೆನೆಂದಡಗಿತ್ತು ೩೫

ಅಡಗಿದ ಸರ್ಪವ ಹಿಡಿದೆತ್ತಿ ಸಂಗಯ್ಯ
ಮೃಡಭಕ್ತರೆಲ್ಲ ಹೊಲೆರೆಯೆಂದು ಮಹದೇವಿ
ಮಡದಿ ತಂದರೆದು ತನಿವಾಲ ೩೬

ತನಿವಾಲ ಸವಿವುತ್ತ ತನ್ನ ತಾ ನೋಡುತ್ತ
ತಾನೆ ತಾನಾದವರ ನೆನೆವುತ ಹೊಗಳುತ್ತ
ದೇವೇಶಸರ್ಪ ಮೊರೆವುತ್ತ ೩೭

ಮೊರೆವ ಸರ್ಪವ ಕಂಡು ಮೂಜಗವು ಉರಿದೆದ್ದು
ತರಿದಾಡಿ ತಮ್ಮೊಳಿರಿದಾಡಿ ಸುರಿದಾಡಿ
ಮರುಳು ತಂಡಗಳೆಲ್ಲ ಕುಣಿದಾಡಿ ೩೮

ಮರೆದು ಡರ್ರನೆ ತೇಗಿ ಮರುಳು ತಂಡಗಳೆಲ್ಲ
ಮಝ ಭಾಪುರೆಂದು ನಲಿದಾಡಿ ಪಿಡಿದಿರ್ದ
ಅಜಕಪಾಲವು ತುಂಬಿ ತುಳುಂಕಾಡಿ ೩೯

ಈ ಸಂವತ್ಸರ ತೀರಿತಾ ಸಂವತ್ಸರ ಬಂದಿತಾ
ಸಂವತ್ಸರದೊಳಗಾನಂದದ ಶಿವಯೋಗ
ದೇಶಪಾಲಿಪನ ವಸಗೆಯು ೪೦

ಲಿಂಗವ ಹಾಡಿರೊ ಲಿಂಗವ ಬೇಡಿರೊ
ಲಿಂಗವ ನೀವು ನೋಡಿ ಸುಖಿಯಾಗಿ ಬದುಕಿರೊ
ಸಂಗಯ್ಯನಾಣೆ ಪುಸಿಯಲ್ಲ ೪೧

ಕಾವೇರಿ ಮಧ್ಯದಲಿ ದೇವಸಭೆಯಾಯಿತ್ತು
ದೇವ ದೇವೇಶ ಬಸವಣ್ಣನಳಿಯಗೆ
ಭಾವಪಲ್ಲಟವು ಷೋಡಶಕಳೆಯು ೪೨

ಷೋಡಶಕಳೆಯಾಯಿತ್ತು ಸೋಮೇಶನ ಕರಜಾತ
ಆದಿ ಅನಾದಿ ಬಸವೇಶ ಕೂಡಲಸಂಗ
ಆದಿಭಕ್ತರೊಳೊಡಗೂಡಿ ೪೩

೫೨

ರಾಗ ॥ ತೆಲುಗ ಕಾಂಬೋದಿ

ಶೂಲದ ಹಬ್ಬಕ್ಕೆ ಡಂಗುರ
ರಾಯರಾಜರುಗಳನೆಲ್ಲ ಡಂಗುರ
ಮೊಳೆಯು ಮುರಿದರ ಡಂಗುರ
ಕಪಾಲಿಯ ಭಕ್ತರು ಡಂಗುರ ೧

ನುಗ್ಗೆಯಹಳ್ಳಿಗೆ ಡಂಗುರ
ಒಂದು ನೂಕಿಸಿಕೊಂಡರು ಡಂಗುರ
ನುಗ್ಗು ನುರಿಯಮಾಡಿ ಡಂಗುರ ೨
ಅಲ್ಲಿದ್ದವರೆಲ್ಲರ ಡಂಗುರ

ಕಟ್ಟಾಳುಗಳು ನಿಂತು ಡಂಗುರ
ತಾನೆ ಕಟ್ಟಿದ ಕಲಿಕಾಮು ಡಂಗುರ
ರಟ್ಟೆಯು ಮುರಿದರು ಡಂಗುರ ೩
ತಲೆಯು ಕಟ್ಟಿ ಬಿಸಾಟರು ಡಂಗುರ

ಮೂಸಾಳುಗಳು ನಿಂತು ಡಂಗುರ
ಮಾಯಾಪಾಶವ ಪರಿದರು ಡಂಗುರ
ದೇಶಕೊಡೆಯ ಚೆನ್ನ ಡಂಗುರ ೪
ಬಸವೇಶನಾಳು ನಾನು ಡಂಗುರ

ಭಕ್ತರ ಭೃತ್ಯನು ಡಂಗುರ
ಕೇಳಿ ಸಾಕಿದವರನೆಲ್ಲ ಡಂಗುರ
ಮಸ್ತಕಶೂಲನು ಡಂಗುರ
ನಮ್ಮ ಚಿಕ್ಕಬಸವರಾಜ ಡಂಗುರ ೫

ಗರುಡಧ್ವಜವನೆತ್ತಿ ಡಂಗುರ
ಒರಡು ಹಯನಾಯಿತ್ತು ಡಂಗುರ
ಕುರುಡ ಕಣ್ಣ ಕಂಡು ಡಂಗುರ
ಕೂಡಿಕುಣಿಯಿತು ಜಗವೆಲ್ಲ ಡಂಗುರ ೬

ವೃಷಭಧ್ವಜವನೆತ್ತಿ ಡಂಗುರ
ಮುಂದೆ ಪಸರವನಿಕ್ಕಿದೆ ಡಂಗುರ
ದೆಸೆಯೇಟು [ಕೂಡಿತು]ಡಂಗುರ
ಬಸವಣ್ಣನಟ್ಟುತಾನೆ ಡಂಗುರ ೭

ಜಗದಾರಾಧ್ಯನೆಂದು ಜಗಜಂಪಿನ
ಧ್ವಜವೆತ್ತಿ ಜಗದ ಕಡೆಯ ಕುಂಭ
ಜಗಜಗಿಸಿತು ಜಗವೆಲ್ಲ ಉಂಡು ಬಾಳ್ದರೆಲೊ ೮
. . . . . . . . .

ಅವರು ಉಪವಾಸವಿದ್ದರು
ಹಂಡೆದಿರುಕರೆಲ್ಲ ಹಸಿದು ಸತ್ತರಲ್ಲ ೯

ಕ್ಷತ್ರಿಯರಾಯನು ನುಡಿ ತಪ್ಪಬಾರದೆಂದು
ಕತ್ತಿಯ ಪಿಡಿದಿಂದು ನಾನು ಸತ್ಯವಸಾರಿದೆ ೧೦

ಎತ್ತಿನ ಹಬ್ಬಕ್ಕೆ ಬಿರಿದೆತ್ತಿ ನಡೆದರಿಂದು
ಚನ್ನಮಲ್ಲ ಭಕ್ತರಿಗಾಳಾದ ೧೧

ಸತ್ಯಗಾಲವಿದು ತಂದರ್ತಿಯುವಾರಿದೆ
ಮುಕ್ತರಾಟವಿದು ಮೂರು ವರುಷಕೆ ಮುಗಿಯಿತು ೧೨

ಮೂರು ವರುಷದೊಳು ಡಂಗುರ
ಮೂರು ರಾಯರುಗಳ ಕೊಂದು
ಆಡಿಮುಗೀತೆಂದು
ಆದಿಸಂಗಮೇಶ್ವರನಾಣೆ ೧೩

ಸಟೆಯೆಂಬವರ ಗಂಡ ಈಗ
ದಿಟವೆಂಬವರ ತೊಂಡ

ಕುಟಲಿಗಳಳಿದರು ಸಿದ್ಧ
ಬಸವನಾಣೆ ಕೇಳಿ ಡಂಗುರ ೧೪

ಆರವಿಹಾರಿತಲ್ಲ
ತೂರ್ಯ ತುರುಕವಂತ
ಧಾರುಣಿಯೊಳಗೆಲ್ಲ
ನಿಂದ ವೀರವಸಂತನು ೧೫

ಕಡೆಯ ಕುಂಭ ಕೈಯಯೆಂಬ
ನುಡಿಯುಂಟು ಮಕ್ಕಳ
ಒಡಗೂಡಿ ನಾ ಬಂದೆ ನೋಣ
ಬಡಿವ ಕುಂಭವಿದೆ ೧೬

ಆಸ್ಮಿಕದ ರಾಯಯೆಂದಾನಂದಮು ಪುಟ್ಟಿ
ದೇಶದೇಶವೆಲ್ಲ ಮೂರುಮಾಸದಿಂದತ್ತತ್ತ ೧೭

ಮೂರುತಿಂಗಳಿಗೆ ಡಂಗುರ ಮುಂದೆ
ಮುಂದೆ ಸೂರೆಯಬ್ಬರವಿದ್ದು
ರಾಜರಾಜರಿಗೆ ತೋರಿ . . .
. . . . . . ಗುವೆಯೆನುತಿದೆ ೧೮

ರಾಜ ಭಯವು ತಪ್ಪಿ
ಮೂಜಗದೊಳಗೆಲ್ಲ
ವೀರವಸಂತನಯೆಂದು
ಗೋಜುಗೋಜಾಯಿತು ೧೯

ಕಾರುಣಿಕದರ ನುಡಿ ನಮ್ಮ
ಕರಿಯ ಬಸವರಾಜ
ರಾಜ ವಸಂತನುಯೆಂದು
ಮೋಹಿಪುರವಾಯಿತು ೨೦

ಮಲೆನಾಡ ಬೆಳೆತಪ್ಪಿ
ಹೊಳೆಗಳೆಲ್ಲವು ಬತ್ತಿ
ಪ್ರಳಯವಾಯಿತಿಂದು
ತಲ್ಲಣಿಸಿತು ಮೂಜಗ ೨೧

ಈ ಸಂವತ್ಸರದೊಳು
ವ್ಯಾಸ ಕಾಶಿಯ ಪುರವೆಂದು

ವ್ಯಾಸನ ಕರವೆತ್ತಿ
ವಿಶ್ವೇಶ ಬಸವರಾಜ ೨೨

ಆದಿ ಆಟವಿದು
ಆದಿ ಗುರುಲಿಂಗ ಜಂಗಮ
ಮೂರುಕಣ್ಣ ಶೂಲ
ಕೇಳಿ ಮುಕ್ತರಾಟವಿದು ೨೩

ಸೂರೆಗೊಟ್ಟರೆಲೊ ಮುಂದೆ
ಶೂಲಕೆ ಬಲಿಗಳ
ಕಾಲನವರು ಕಟ್ಟಿತಂದು
ಗೋಣನರಿದಂದು ೨೪

ಮಳೆವುಂಟು ಬೆಳೆಯಿಲ್ಲ
ಸತ್ಯ ಶರಣರುಗಳುವುಂಟು
ಉಳಿದೆನೆಂದೆನ ಬೇಡ
ನಿಮ್ಮ ಬಲುವು ಇಂದಿಗೆ ಸರಿ ೨೫

ಉಳುವೆಗಣಂಗಳ ನಾನು
ಹಳೆಯುರ ಹಳೆಯನು
ಹಳೆಯು ಭಕ್ತರಿಗೆ ಡಂಗುರ
ಲಿಂಗಪುಳಕಿತವಾಯಿತು ೨೬

ರಕ್ತಾಕ್ಷಿಯೊಳಗೆಲ್ಲ ಕೇಳಿ
ರಣಮಯ ಹೆಣಮಯ
ಶಿವನಾಣೆ ಪುಸಿಯಲ್ಲ
ಸಿದ್ಧರಾಮನಾಣೆ ಕೇಳಿ ೨೭

ಶರಣು ಸಿದ್ಧರಾಮ
ಶರಣು ಸದಾಶಿವಲಿಂಗನು
ಇರಿದು ಕೊಲ್ಲುತಿಹ ನಮ್ಮ
ಚೆನ್ನವೀರಭದ್ರ ೨೮

ದಕ್ಷಕೋಳಾಹಳ ಕೇಳಿ
ದಕ್ಷ ಸಂಹಾರನು
ಮುಕ್ಕಣ್ಣ ಕರಿವೀರ
ರಾಚವಟ್ಟ ವೀರಭದ್ರ ೨೯

ಮಳೆಯಿಲ್ಲ ಬೆಳೆಯಿಲ್ಲ
ಮರುವೆ ಮಾನುಪರಿಗೆ
ಕತ್ತಲೆಯಾಯಿತು ನಮ್ಮ
ಕರ್ತಗ್ ಬಸವನಾಣೆ ೩೦

ಇದಕೆ ತಪ್ಪಿದರೆ ಡಂಗುರ
ಸುರೆಯು ಗಡಿಗೆಯನು ಡಂಗುರ
ಶಿರದ ಮೇಲೆ ಹೊತ್ತು ಡಂಗುರ
ನಿಮ್ಮ ಪರಿಯಂತೆ ನಾನಹೆ ಡಂಗುರ ೩೧

೫೩

ರಾಗ ॥ ಕೇತಾರಗೌಳ

ಶಂಭುವಿನಾನಂದವು ದುಂದುಭಿಸಂವತ್ಸರದಿ
ದುಂದುಭಿ ರುಧಿರೋದ್ಗಾರಿಯು ಮುಂಗಾರಿನ ಕುರುಹ
ಚಂದ್ರಶೇಖರ ನಮ್ಮ ಗಂಗೆಯು ಪ್ರಳಯವೊ
ಸಂಗಮೇಶ್ವರನೆ ಬಲ್ಲ ೧

ಕೋಟಿ ಕೊತ್ತಳ ಹದುಗಿ ಬಿದ್ದು ಧರಣಿಯು ಕೂಡಿ
ಲೂಟಿಯಾಯಿತ್ತು ಮರ್ತ್ಯಲೋಕಕ್ಕೆ ಕಡೆಯು
ಚೀಟಿ ತಂದೆನು ಕೇಳಿ ಕೋಟ್ಯಾನನಂತಕೋಟಿ
ಈ ಕುಂಭದೊಳಗರಿದು ೨

ನೋಟ ಬೇಟವು ಭಕ್ತಿ ಮಾಟ ಲಿಂಗದ
ಆಟವಾಯಿತು ರತ್ನದೋಕುಳಿ ವಸವಂತ
ನೋಟಕಾರನು ನಮ್ಮ ಪ್ರಭುರಾಯನು
ಬಂದಾಟವನೇನೆಂಬೆನು ೩

ಸೋಮವಾರವುವಾಸಿ ಧ್ಯಾನೈಸಿಲಿಂಗದೊಳು
ಆ ಮಹಿಮನು ಸೌರಾಷ್ಟ್ರದ ಸೋಮೇಶನು ನಿಂದು
ಏನೆಂದು ಕುರುಹಿಟ್ಟನು ಹಂಸಿಯೆಂಬ ಮರೆವೆಯು
ಧ್ಯಾನದಿ ತಿಳಿದು ನೋಡಿ ೪

ಕಾನನದೊಳಗಿರ್ದ ಕರ್ಮಿಗಳಿಗೆ ಕಾಣಿಸದು
ಆ ಮಹಿಮನ ಭಕ್ತರಿಗೆ ಆನಂದವಹುದು
ಏನೆಂಬೆ ಮಹಿಮರ ತಮ್ಮೊಳು ತಾವಿರಿದಾಡಿ
ಸೂರೆಯಾಯಿತು ಪುರವು ೫

ಸಟೆಯೆಂಬ ದೂಷಕರಿಗೆ ಕಠಿಣದ ಬಿರುದುಗಳೆತ್ತಿ
ನಟನೆಯ ಸಾರಿದೆ ಸಮ್ಮ ನಂದೀಶ ಹೊಗಳಿ
ಕಟಕ ಕಾವೇರಿ ಮಧ್ಯದೊಳ್ನಿಂದ
ನಟನೆಯನೇನೆಂಬೆನು ೬

ಉಗಹಾದಿ ಅಮವಾಸೆ ಹದಿನೈದು ದಿನದೊಳು
ಗುಡಿಯ ಕಟ್ಟಿದೆನು ಪೌರ್ನಮಿಯು ಮಂಗಳವಾರ
ಸದೆಬಡಿದನು ಶರಣ ಶರಭಭೇರುಂಡನು
ಗುರುಗೊಹೇಶ್ವರನಾಣೆಯು ೭

ಕಲಿಯುಗ ಕಡೆಯೆಂದು ಕರಿಯಬಸವ ತಂದ
ಕರಿಭಕ್ತರುಗಳು ಕೂಡಿ ಕರುಣಾಕರನೆಂದು
ಲಲನೆ ಭ್ರಮರಾಂಬಿಕೆಯು ರವುದ್ರವ ನೋಡುತ್ತ
ಅರಸು ಕೂಡಲ ಸಂಗನು ೮

೫೪

ಭಿಕ್ಷಕೆ ಬಂದನವ ಲಕ್ಷಕೊಬ್ಬನೆಯೆಂದು
ಅಚ್ಚರಿಯ ಉಚ್ಚಹದ ಭಿಕ್ಷ
ಅಕ್ಷಿಕಪಾಲದೊಳು ಅವನು ಸೂಸುತ್ತ
ರಕ್ಷಿಸುತ ಬಂದವಗೆ ಭಿಕ್ಷ ೧

ಭಿಕ್ಷಮೋಕ್ಷಾಕಾಮಿ ಚಿಕ್ಕಸಿದ್ಧೇಶನವ
ರಕ್ಕ ಹೊನ್ನಾಂಬಿಕೆ ಭಿಕ್ಷ
ಕಪ್ಪರವ ಪಿಡಿದು ಪೆಗಲೊಳು ಪೊತ್ತು ನಟಿಸುತಿಹ
ಚಿಕ್ಕಸಿದ್ಧೇಶಂಗೆ ಭಿಕ್ಷ ೨

ಭಕ್ತರಿಗೆ ಭೃತ್ಯನು ನಿತ್ಯ ನಿರ್ವಾಣನು
ಸತ್ಯ ಏಕೋದಂಡ ಭಿಕ್ಷ
ಸತ್ಯವಿದು ನಿತ್ಯವಿದು ನಿರ್ವಾಣನಿರೂಪವಿದು
ಅರ್ಥಿ ಆನಂದವಿದು ಭಿಕ್ಷ ೩

ಆನಂದ ಅನಿಮಿಷನ ಅರುಹು ತಲೆದೋರಿತ್ತು
ಅನಾದಿ ಜಂಗಮಕೆ ಭಿಕ್ಷ
ಏನೆಂಬೆ ನಾ ಶಿವನ ಉರಿಲಿಂಗದೋದ್ಭವದ
ಕಾಮಿನೀಕಾಮಂಗೆ ಭಿಕ್ಷ ೪

ಹಮ್ಮನಾಡಿದ ಬೊಮ್ಮನ ತಲೆಯ ಚಿವುಟೀಗ
ತಿಮ್ಮನ ತಲೆ ಪಿಡಿದವಗೆ ಭಿಕ್ಷ

ತಿಮ್ಮನಂ ಬೊಮ್ಮನಂ ಕ್ಷುದ್ರನಂ ತಲೆಗಡಿದು
ನಮ್ಮಯ್ಯ ಪಿಡಿದು ಭಿಕ್ಷಕೆಬಂದ ೫

ಪರಮಪ್ರಭು ತನ್ನ ಪಾರ್ವತಿಯೊಳೊಡಗೂಡಿ
ಪರಮಲೀಲಾನಂದ ಭಿಕ್ಷ
ಶರಣರುಗಳು ಕೂಡಿ ಸತ್ಯವು ತೋರುತ್ತ
ಗುರುಗುಹೇಶ್ವರ ಬಂದ ಭಿಕ್ಷ ೬

ಸತ್ತಿಹೋಹರ ಗಂಡನೆಂದೆಂಬ ಪೆಂಡೆಯವ
ಕಟ್ಟಿ ಆಡುತ್ತಿಹಗೆ ಭಿಕ್ಷ
ಭಕ್ತಕೂಡಲ ಚೆನ್ನಸಂಗಯ್ಯನಾಳಿಂಗೆ
ಮುತ್ಯಾಂಗನೆಯರೊಂದು ಭಿಕ್ಷ ೭

ಅರಿದಲೆಯು ತೊಡರ ಬೊಂಬೆಯು ಕಟ್ಟಿ ಕಾಲೊಳಗೆ
ಮೃಡಕುಮಾರನು ಬಂದ ಭಿಕ್ಷ
ಅರಿವ ಚಕ್ರವ ಬೆಸೆದು ಕಾಪಾಲಿಯೆಂದೆಂಬ
ಕರಿಯುಸಿದ್ಧೇಶಂಗೆ ಭಿಕ್ಷ ೮

ರೇವಣಾರ್ಯನಕುವರ ರುದ್ರಮುನಿ ಚಿಕಸಿದ್ಧ
ಬಾಳುಬಟ್ಟಲು ಪಿಡಿದ ಭಿಕ್ಷ
ಏಳುನೂರೆಪ್ಪತ್ತು ಅಮರಗಣ ಸಹವಾಗಿ
ಧಾಳಿಮೂಡಿದನೆಂದು ಭಿಕ್ಷ ೯

ಭಕ್ತಿಯೆಂದೆಂಬ ಕಪ್ಪರವ ಕರದೊಳು ಪಿಡಿದು
ಶಿಕ್ಷಿಸುತ ಬಂದವಗೆ ಭಿಕ್ಷ
ಕರ್ತು ತ್ರಿಲಿಂಗ ತ್ರಿಶೂಲದೊಳಗೊಳಪೊಕ್ಕು
ಸೊಕ್ಕಿದವರಿರಿದವಗೆ ಭಿಕ್ಷ ೧೦

ಸೊಕ್ಕಿಪ್ಪ ಅಜಹರಿಯು ರುದ್ರರುಗಳು ಸೀಳ್ದು
ಭಕ್ಷಿಸುತ ಬಂದವಗೆ ಭಿಕ್ಷ
ಮಿಕ್ಕಿನವರ ತರಿದು ರಣಭೂತಕೌತಣವ
ಇಕ್ಕುತ್ತ ಬಂದವಗೆ ಭಿಕ್ಷ ೧೧

ಕುಕ್ಷಿಭರಿತವು ಕುಂಭಿನಿಯು ಕುಂಭಿನಿಯು
ಕುಂಭ [ದೊಳು ಬಂ]ದು ಮುಕ್ಕಣ್ಣನಾಳಿಂಗೆ ಭಿಕ್ಷ
ಭಕ್ತರಿಗೆ ಪ್ರಿಯ ಭ್ರಮರಾಂಬಿಕೆಯೊಳೊಡವೆರೆದ
ಕರ್ತು ಸಿದ್ಧೇಶಂಗೆ ಭಿಕ್ಷ ೧೨

೫೫

ರಾಗ ॥ ವಡೆಧನ್ನಾಸಿ

ಇಂದಿನವರೆ ಅವರು ಅಂದಿನವರೆ ಇವರು
ಅಂದು ನುಡಿದವರಿಂದು ನುಡಿದರೆಲವೊ ॥ ಪಲ್ಲ ॥

ಕಲ್ಯಾಣ ಪಟ್ಟಣದ ಕಾಂತಿ ಬಯಲೆಂದಾಗ
ಪಲ್ಲಿ ನುಡಿಯಲು ಕೇಳಿ ರಾಯ ಕೇಳಿ
ಪಲ್ಲಿ ನುಡಿದ ಫಲವು ಬಲ್ಲೆಯೆಂದೆನಲಾಗಿ
ಅಲ್ಲಿ ನುಡಿದವ ಕಾಳಬಸವ
ಸಲ್ಲೀಲೆಯಿಂ ನಮ್ಮ ಶಿವನೊಡನೆ ಮಾತಾಡಿ
ಬಲ್ಲಿದನ ಬಲವರಿದರು
ನಮ್ಮ ಶರಣರುಗಳಂದಿನವರೆ
ಇವರು ಇಂದಿನವರೆ ಅವರು ೧

ಅಂದು ಕಲ್ಯಾಣದಲಿ ನುಡಿದ ಪಲ್ಲಿಯು ಬಂದು
ಇಂದು ಮರ್ತ್ಯದಲಿ ನುಡಿಯಿತು
ಮುಂದುಗಾಣದೆ ಮೂರುಲೋಕ ತಲ್ಲಣಗೊಂಡು
ಹಂಬಲಿಸಿ ಕಳವಳಿಸಿತಿಂದು
ಚಂದ್ರಶೇಖರ ಬಸವ ಪಲ್ಲಿ ನುಡಿದ ಫಲವ
ತಂದೆ ಕೂಡಲ ಚೆನ್ನಸಂಗಯ್ಯ ಪೇಳ್ದ ೨

ಊರಬ್ಬರವ ಕಂಡು ಸಾರಿ ಗಿಡುಗಳ ಸೇರಿ
ಮಾರಿ ಮಸಣಿಯು ಹಿಂಡು ಹೆಚ್ಚಿ
ವೀರವಸವಂತರಾಯನೆ ಮೊರೆಯೊ ಮೊರೆಯೆಂದು
ಆರಣ್ಯದೊಳಗೆ ನರಕಿಗಳು
ಸೂರೆಗೊಟ್ಟೆಯೆಮ್ಮ ಮರುಳು ಭೂತಕಿಯೆಂದು
ಕ್ರೂರ ಮನುಜರು ನುಡಿದ ನುಡಿಯಿದೇಕೊ ೩

ಎತ್ತಿನ ಬಸವಯ್ಯನು ಎತ್ತಿ ಸಾರಿದು ಕಡೆಯು
ಕರ್ತನೊಬ್ಬನೆಂದೆಂಬ ಬಿರಿದ
ಸತ್ತು ಹೋಹರಗಂಡನೆಂದೆಂಬ ಪೆಂಡೆಯವ
ಕಟ್ಟಿ ಮೆರೆದಿಹನು ಕಾಲೊಳಗೆ
ಭಕ್ತ ಕೂಡಲ ಚೆನ್ನಲಿಂಗ ಬಸವಯೆಂದು
ಕಲಿಯು ಮೆಟ್ಟಿಯಾಡಿದನು ಪಾದದಲಿ ತೊಡರುಗಳ ೪

ಭಕ್ತಿ ಭಾಷೆಯು ಬೇರೆ ಕರ್ತುತಾನಾಗಿಪ್ಪ
ಮುಕ್ತರಿಗೆ ತಂದ ಕುರುಹಿನೇಕೊ
ಸತ್ತು ಹುಟ್ಟುವ ಹೀನ ಮಾನವರು ನಮ್ಮವರ
ಎತ್ತ ಬಲ್ಲಿರಿ ಹಂದಿಗಳಿರ
ಅರ್ತಿ ಉತ್ಸವ ಇಂದಿನ ದಿವಸ ಭಕ್ತರಿಗೆ
ಕರ್ತು ಕೂಡಲ ಚೆನ್ನಸಂಗಯ್ಯ ಪೇಳ್ದ ೫

೫೩

ರಾಗ ॥ ಕೇತಾರಗೌಳ

ಗುರು ಲಿಂಗ ಜಂಗಮ ನರರಿಗಿಲ್ಲವುಯೆಂದು
ಪರಮದೇಶಿಕ ಸಾರಿದ
ಗುರು ಪ್ರಸಾದವು ಲಿಂಗ ಪಾದೋದಕವೆಂದು
ಗುರುಪುರದಿಂ ಬಂದನು ॥ ಪಲ್ಲ ॥

ಗುರುವ ಕಾಣದೆ ಗುರುಲಿಂಗವ ಕಾಣದೆ
ಜಂಗಮುವನು ಕಾಣದೆ
ಗುರು ಪಾದೋದಕವೆಂದು ಕೊಂಬವರನು
ಶಿರವ ಹರಿಯಲೆಚ್ಚನು ೧

ವಿರಹ ಪುಟ್ಟಿದೆ ಇಷ್ಟದ ನೆಲೆಯಿಲ್ಲದೆ
ಶರಣರಿಗಾಳಾದನೆ
ಕರುಣಾಕರನು ಕಾಲನ ಸಂಹಾರ ಕಾಮನ
ಉರುಹಿ ಭಸ್ಮವನಿಟ್ಟನೆ ೨

ಪೆರೆದಲೆಯುಭವನೆ ಪೆರತುಳ್ಳ ಭಕ್ತರ
ವಿರಚಿಸುತ ಬಂದನೆ
ನರನಾಟಕ ನಮ್ಮ ಗುರು ಸಿದ್ಧ ಬಸವನ
ಬಿರಿದ ಸಾರುತ ಬಂದನು ೩

ಶೂಲಧರನೆ ಸುರರರ್ಚಿತ ಬ್ರಹ್ಮಕಪಾಲನ
ಪಿಡಿದಹನೆ ನೀಲಕಂಠನು
ನೀಲಲೋಚನೆಯರಸ ಬಂದ
ಆಲೈಸುವರ ಕಾಣೆನೆ ೪

ಕಾಲಾಗ್ನಿರುದ್ರ ಕಪ್ಪಿನಿಪತಿ ನಂಜುಂಡ
ಕಾಳಹಸ್ತೀಶ್ವರನು ತಾನೆ ತನ್ನ
ಲೀಲೆಯಿಂ ಭಕ್ತ ಜನಕೆ ಭೃತ್ಯನಾದನು
ಲೋಲ ಕಪ್ಪಡಿಸಂಗನು ೩

೩೭

ರಾಗ ॥ ಶ್ರೀ ರಾಗ

ಓಲೆಯು ತಂದೆ ಸತ್ಯಗಾಲಕ್ಕೆ ಕೆಂಪ ಗಂಗಾಧರ
ಓಲೆಯು ತಂದೆ ॥ ಪಲ್ಲ ॥

ಭವರೋಗ ವೈದ್ಯನು ಭಕ್ತ ಸಂಗಮೇಶನು
ಭವಹರ ಗುರು ಸಂಗಮೇಶನು
ಭವಹರ ಬಸವನು ಭವಹರ ಜಂಗಮಲಿಂಗ
ಭವಹರ ಗುರು ಸಂಗಮೇಶನು ೧

ಭೃಂಗಿ ನಾರುದನು ಅಂಗವಳಿದ ಚೆನ್ನ
ಗಂಗಾಧರನೊಳೊಡಗೂಡಿ
ಜಂಗಮಲಿಂಗ ತಾನಾದ ನಂದೀಶನು
ಮುಂದೆ ಮದ್ದಳೆಗಟ್ಟಿ ನಿಂದಿಹ ೨

ಸತ್ಯವೆಂಬುದೆ ಬ್ರಹ್ಮಕಪ್ಪರ ಎಡಗಯ್ಯ
ಕರ್ತು ತಾ ತ್ರಿಶೂಲವು ಬಲಗಯ್ಯ
ಸತ್ಯವೆ ಹೆಣ್ಣುಸುರುಗಿ ಗಂಗಾಧರ ಲಿಂಗ
ಕರ್ತುವೆ ಗಂಡು ಸುರುಗಿಯೆಂದು ೩

ದೇಶದೊಳಗೆ ಮಾಸನೂರ . . .*

೩೮

ಕಂದ ಪದ್ಯ

ಭವಿಗಳನು ಒಲ್ಲೆನೆಂಬಳು
ಭವ ಹರಿಯಬೇಕೆಂದು ಬಯಸಿ ನಾ ಬಂದೆನು
ಭವರೋಗವೈದ್ಯಲಿಂಗವು
ತರುಣೆಗೆ ಕಲ್ಲೊತ್ತೆಗೊಟ್ಟ ಕರಿಬಸವುಗನು ೧

* ಇದರ ಅನಂತರ ೬೪-೬೫ನೆಯ ಎರಡು ಓಲೆಗಳಿಲ್ಲ

ಒತ್ತೆಯ ಪಿಡಿದು ಲಿಂಗದಿ
ಮುಚ್ಚರಿಸುತ ಮರವೆಯಿಂದ ಕಸ್ತೂರಿಗಂಧಿಯು
ಅಪ್ರ[ತಿಮ]ನೆಂಬ ನಾಮವ
ಮೃತ್ಯುಂಜಯನಿಟ್ಟು ಬರಲು ಹೋಗೋಗೆಂದಳು ೨

ಹೋಗ ಬರಲಿಲ್ಲ ನಾನುವೆ
[ಕೂಗುವೆ] ನಿನ್ನ ಮನದ ಪ್ರಕೃತಿಯನಲ್ಲವ
ಮೂಗ ಕಂಡಂತೆ ಸ್ವಪ್ನದಿ
ಆಗವೆ ನೀಯೆನ್ನ ಸ್ತುತಿಸಿ ಕೊಂಡಾಡುತಿಹೆ ೩

ಅಪ್ರತಿಮ ಲಿಂಗವ ಸ್ವಪ್ನದಿ
ಹಸ್ತದಿ ಕಾಲ್ವಿಡಿದುಕೊಂಡು ಒತ್ತುವ ಸಮಯದಿ
ಎಚ್ಚತ್ತು ಕರವ ಪಿಡಿಯಲು
ಒತ್ತುವೆ ನಾ ಬಿಡೆನೆಯೆಂದ ಅಪ್ರತಿಮಲಿಂಗ ೪

ಹೊಲೆಯನೊಳಗಿರ್ದ ಹೊಲತಿಯು
ಹೊಲಬನರಿಯದೆ ಹೋಗಿ ಬೆರಸಿ ಹೊಲೆಗೇರಿಯೊಳು
ಕುಲಗೆಟ್ಟು ಕೂಡಿ ಲಿಂಗವ
ಭುವನಕೆ ಏಕಾಂಗಿಯಾಗಿ ಕೊಂಡಾಡಿದಳು ೫

ಹರುಷದಿಂ ಪಡುವಣಿಂದಲು
ಕರುಣಾಕರನೊಡನೆ ಕೂಡಿ ಮೂಡಣದಿಕ್ಕಿಲಿ
ಹಿರಿಯಲಿಂಗವನೆ ಕಂಡು ಚರಣಕೆ ನಮಿಸಿದ
ಕರಕಿಡಗೊತ್ತಿದೆ ನಾಂ ೬

ಸೆರಗ್ಹಾಸಿಕೊಂಡು ಲಿಂಗದಿ
ಸೆರೆಯಾ[ಳಾಗಿ] ಲಿಂಗದ ಸೇವೆಯೊಳಿರುತಿಹ
ಪರಮಶಿವ ಕಂಡು ಮನದೊಳು
ಕರುಣಾಕರನೆಂಬ ನಾಮವ ಕರದೊಳಗಿಟ್ಟನು ೭

. . . ಕೂಡುವ
ಲೋಕಕೆ ತಾನಿಲ್ಲದಿರುವ ನೀಲಲೋಚನ ಗಂಧಿಯು
ಈ ಕಲಿಯುಗ . . . ಡನು ೮
ತಾ ಕಟ್ಟಿದ ಕಾಸೆ ನಾಗಬಂಧದಲಿಂಗದೊಳು

ನಂಜುಗೊರಳಭವ ನಂಜಿಯು
ಕುಂಭಿನಿಗಿವ ಪೊಸತು ಕೂಡಲ ಸಂಗನೆ ಸಾಕ್ಷಿಯು

ಮೆಚ್ಚಿ ಮುಸುಕುವದೆ ನಂಜಿಯು
ಕುಂಭೇಶ್ವರವ್ರುಗದಲ್ಲಿ ಪೊಯಿ ಡಂಗುರವಂ ೯

೫೯

ಕಂದ ಪದ್ಯ

ಒಡಗಣದೇಶದ ಶೆಟ್ಟಿಯು
ಒಡಲಿಲ್ಲದ ಒಡವೆ ತಂದ ಪಟ್ಟು ಪಟ್ಟಾವಳಿಯಂ
ಮುಡಂಕುದೊರೆಯೆಂಬ ಜಾತ್ರೆಯ
ಪಡುವಣದಿಕ್ಕಿನೊಳು ಹೊಯಿದ ಗುಡಹಾರವನೂ ೧

ಆತ ನವರತ್ನಶೆಟ್ಟಿಯು
ಪೇತುಂಗಳಿಗೆ ತೋರ ರತ್ನಯಾಪಾರವನಂ
ಏಕಾಂ . . . ನೆಮಿ ಸೆಟ್ಟಿಯು ತನ್ನ
ಪ್ರೀತಿಗೆ ಒಂಬತ್ತುಕೋಟಿಗೊಬ್ಬಗೆ ದಯಾಪರವಿತ್ತನಂ ೨

ಕರ್ಮುದೊಳು ಕರುವ ಕಟ್ಟಿದ
ನಿರ್ಮಲ [ಕುರುಹಿ] ಗೆರಕವೆರದು ಘಟಿಸಿತು ನಿಜವಂ
ಒಮ್ಮನದ ಆರಸ ಪಿಡಿದವ
ಇಮ್ಮನ ಕಲ್ಮಷವನೊರೆದು ಒಪ್ಪಿತವಿಟ್ಟನಂ ೩

ಪ್ರಥಮದೊಳು ಸೂಕರತ್ವವು ಹತವಾಗಿಯೆ
ಸೊಗಬುದಿ ಘಟಿಸಿತು
ಮತ್ತಾ ಶಶಿಮುಖಿಗೆ ಉತ್ತಮಾಂಗಳವಟ್ಟಿನ
ಕಿತ್ತುಗಜಮಹಮ್ಮಹಾನೆ ನಾಂ ಜನವಂ ೪

ಚೆನ್ನಪಟ್ಟಣವಿದಿಕ್ಕಿಲಿ ಚೆನ್ನಿಗನು
ಚೆನ್ನಬಸವ ಜಗ[ದೇವ]ರಾಯಗೆ
ಹೊನ್ನಿತ್ತು ಭೂಮಿಗೊಂಡನು ಹೊನ್ನಾಂಬಿಕೆಯೆಂಬ
ಹೆಂಟೆಘಟಿಸಿದಭವಂ ೫

ಟಂಕಶಾಲೆಯುನು ಇಕ್ಕಿದ ವಿರಹ ವೀರವಸಂತ
ಗಂಟಕೆ ಹೊನ್ನಪೆಟ್ಟಿಸಿದಭವಂ
ಎಂಟು ದಿಕ್ಕಿನಲಿ ನಾಣ್ಯವ ಏಕಾಂತ
ವಸಂತನೆಂದು ನಡೆಸಿದನಭವಂ ೬

ಚವುಕಲೆಯುನಿಟ್ಟು ಮಧ್ಯದಿ ನವರತ್ನದ
ಕಾಲಮೊಚ್ಚ ಕಾಲೊಳಗಿಟ್ಟನು

ಅಯಿರಾವತಾರ ಬಸವನು ಚವುದಂತಿಯನೇರಿ
ಚಂದ್ರಮತಿವಲ್ಲಭನಂ ೭

ಆನೆ ಮದವೇರಿ ಮದಸುರಿದು ಧಾರಿಣಿಯೊಳಂ
ಕರ್ವರ್ಣಹರಿದಂ ಕತ್ತಲೆ ಹೋಯಿತಂ
ಏನ ಹೇಳಂಪೆನು ಇದ ನಾನಂ ಮಾನಿನಿ
ಮದ್ದಾನೆಯೆಂದು ಡಂಗರಹೊಯಿದೆನು ೮

ಬಾದುರಖಾನನ ಬಳಿಯಂ ತೇಜಿಗೆ
ಹನ್ನೊಂದು ಲಕ್ಷ ಹೊನ್ನಿತ್ತು ತಂದೆನು
ಆದಯ್ಯನೆಂಬ ಶೆಟ್ಟಿಯು ಈ ಜಗಕಪ್ರತಿಮ
ರಾಮದೇವಂಗಿತ್ತನಂ ೯

ಅದು ರಾಮಾವತಾರತೇಜಿಯು
ಆ ಮಹಿಮನು ರಾಮದೇವರಾಯಕುಮಾರನು
ತಾನೇರಿ ತಕಿಣಿಕಿಣಾಯೆಂದು ತಾಮಸಗಳ
ಕಟ್ಟಿತುಳಿದ ಪೇರಣೆಯಿಂದಂ ೧೦

ಪೇರಣೆಯು ಕಟ್ಟಿ [ನ]ಡೆಯಲು
ಧಾರುಣಿ ಗಡಗಡನೆ ನಡುಗಿ ಅಡಿಮೇಲಾಯಿತು
ಷೋಡಶ ಹದಿನಾರುಕಳೆ ರಾಜಿಪ
ಇಪ್ಪತ್ತೊಂದುಸಹಸ್ರಯುಗವಾಳಿದನಂ ೧೧

೩೦

ಕಂದ ಪದ್ಯ

ಪುಲಿದೊಗಲನುಟ್ಟ ದೇವನು
ಪುಲಿಯಾವುದು ಹೇಳಿ ನೀವು ಹೊಲೆಮಾನುವರ
ಹೊಲೆಗಳಿದು ಪೊಲೆಯರಾದುದ
ನೆಲೆಗಾಣ್ಬವರಾರು ಹೇಳಿ ನರಪಶುಗಳಿರಾ ೧

ನಾಯನೆಳೆವುದಕೆ ಹೊಲೆಯನು
ಆ ಕಯ್ಯಲಿ ಪಿಡಿದ ಪಾಶ ಪೂಸಿದ ಎಣ್ಣೆಯು
ಈ ಕಲಿಯುಗವೆಂಬ ನಾಯನು
ಈ ಲೋಕದೊಳೆಳೆವರಿಗೆ ಅವುತಳವಿತ್ತನಂ ೨

ಆಹುದಹುದು ಹೊಲೆಯನಹುದೈ
ಆಹುದಹುದು ಭಕ್ತರುಗಳ ಭವಭವ ಹೊಲೆಯಂ

ಅಹುದಹುದು ತನುಮನಧನದ
ಹೊಲೆಯು ಕ . . . ನೊಳಗ ತಿಳಿದವ ಹೊಲೆಯಂ ೩

ನಾ ಭಕ್ತನು ನಾ ರಾಜನು ನಾ ದೇವರು
ನಾನೆಯೆಂಬ ನರನಾಯಿಗಳಂ
ಅರಿಯಿ[ರರಿಯಿರಲವೊ ತಾ]ನು
ಈ ಲೋಕದೊಳಿಳಿದು ಭೂತಕವುತಳವಿತ್ತನು ೪

ಉಸುಬಿನ ಮಳೆ ಹೊಯಿದು ಧರೆಯೊಳು
ಬಸವಣ್ಣನ ದಂಡು ಬಂದು ಪಶುಗಳು ಬೆದರಲು
ಅಸಮಾಕ್ಷಧಾಳಿ ನಡೆದುದ
ಈ ಒಸಗೆಯನಿನ್ನೇನ ಹೇಳ್ವೆ ಪುಸಿಹೊಲೆಯರಿರ ೫

೩೧

ಕಂದ ಪದ್ಯ

ಬಿಂದುವೆಂದೆಂಬ ಭ್ರಷ್ಟರು
ಬಿಂದುವ ತಾವರಿಯದಿಹರು
ಸಂದೇಹಿಗಳಂ ಲಿಂಗದೇಹಿಗಳು ಬಲ್ಲರು
ಬಿಂದುವೆ ಪರಮಾತ್ಮನೆಂದು ಡಂಗುರ ಹೊಯಿದೆನು ೧

ಆ ಪರ ಪರಮಾತ್ಮ ಬಿಂದುವ
ಚಾತುರ್ಯದಿ ನಿಲಿಪೆನೆಂದು
ಅಜ ಹರಿ ರುದ್ರರು ಸೂಕರಭವಕೊಳಗಾದುದ
ಯಾಕರಿ ಕುರಿಗಳೆಂದು ಡಂಗುರ ಹೊಯಿದೆನು ೨

ಜಲ ಮಲ ವೀರ್ಯವ ಬಿಂದುವ
ಕಲೆಯೆಂಬರು ಆರು ದರುಶನದಧಮಕ್ರಿಯರು
ಛಲದಂಕ ಕರಿಯಬಸವನ ಈ
ಹೊಲೆ ಮಾನವರೆಂದು ಡಂಗುರ ಹೊಯಿದೆನು ೩

ಭೋಗದ ಯೋಗದ ನೆಲೆಯನು
ಕಾಗೆಯು ತಾವೇನ ಬಲ್ಲೊ ಕೋಗಿಲೆಗಲ್ಲದೆ
ಕೋಗಿಲು ಕರಿಬಸವಾರ್ಯನು
ಶಿವಯೋಗವ ತಾವೇನ ಬಲ್ಲೊ ಕಾಗೆವಿಂಡು ೪

## ೬೩

### ಕಂದ ಪದ್ಯ

ಹದಿನೆಂಟುಯುಗದಿ ಬ್ರಾಹ್ಮಣ
ಹದಗೊಳಿಸಿಯೆ ಲಿಂಗದಲ್ಲಿ ತಪವಂ ಮಾಡಲು
ಚಿದುರೂಪ ಮಗನು ಪುಟ್ಟಿದ
ಕದನಕೆ ಕಂಠೀರವನೆಂಬ ನಾಮವನಿಟ್ಟನು ೧

ಮುಂಜಿಗಟ್ಟುವರೆ ಬ್ರಾಹ್ಮಣ
ನಂಜಿ ನಂಜುಂಡನೆಂಬ ಮಂತ್ರಾಕ್ಷತೆಯುಂ ಕಂದಂಗೆ
ಮುಂಜಿಗಟ್ಟಿದ ಮಂತ್ರಾಕ್ಷತೆಯಿಟ್ಟು
ಮಗನೆ ನೀ ನಾನೆಂದು ೨

ಓದಕುಳ್ಳಿರಿಸಿ ಬ್ರಾಹ್ಮಣ
ಮಹಾದೇವರ ಗಂಡನೆಂಬ ಗಣನಾಥನ
ಪೂಜಿಸಿ ಆದಿಯಿಂದತ್ತ ಮೀರಿದ ಅನಾದಿಯು
ಓಂ ನಮೋ ನಮೋಯೆಂದು ಓದಿಸಿದೆನ್ನನು ೩

ಓದಿಸಿ ಮದುವೆಯು ಮಾಡಿದ
ಮಹಾದೇವರಿಗೊಡತಿಯೆಂಬ
ಭೂದೇವತೆಯನು ನಾಗೋಲೆಯೆಂದು
ಮಾಡಿದ ಆಗೋಚರವೆ ನಾನು ಪೇಳುವರಳವೆ ೪

ಮುಪ್ಪಾಗಿಯೆನ್ನೊಳಡಗಿದ
ಕರ್ಪೂರ ಉರಿಸೋಂಕಿ ಕರ್ಪೂರ ಉರಿಯಾದಂತೆ
ಅಚ್ಚರಿಯುವಾದ ಕರಿಸೆಂದೆನ್ನಪ್ಪನು ೫
ಕಯ್ಯೊಳಗೆ ಇತ್ತ ಕಸಕೊಲೆಯೆಂದು

ಇತ್ತ ನವಖಂಡಪೃಥ್ವಿಯು
ಮರ್ತ್ಯರ ಮಹಿಪುರದ ಮರವೆಯು ಮರಿಹುಡುಗರುಗಳ
ವಿಸ್ಮಯಂದ ವಾದಕಲಿಸಲು ೬
ಚಿತ್ರದ ಗಣನಾಥನೆಂಬ ವಿನೆಯುನ ಪೂಜಿದೆ

ಅಕ್ಷಿಪಾತ್ರೆಯೊಳು ಶ್ರೀಗಂ
ಧಾಕ್ಷತೆಯು ತುಂಬಿತಂದ ಉಪಾಧ್ಯರು ನಾನಯ್ಯ
ಶಿಕ್ಷೆಯನು ಮಾಡಿ ಶ್ರೀಗಂ ೭
ಧಾಕ್ಷತೆಯನುಯಿಟ್ಟು ಪರಬ್ರಹ್ಮವ ಓದಿಸಬಂದೆನು

ಪರಮ ಯೋಗೀಶರಾಜನು
ಪರಮಾತ್ಮನು ಅಂತರಾತ್ಮ ಕರಿಬಸವಾರ್ಯನು
ಪರಂಗಿಕೆಂಡವಿಡಿದನು
ಅರುಣೋದಯವೆಂದು ತೋರಿ ಅಡಗಿದ ಪರಿಯಂ ೮

೬೩

ಕಂದ ಪದ್ಯ

ಪುರುಷವಾಗಿಹುದು ಸರ್ಪಗೆ
ನರಕಿಗಳನ್ನಗಿಯುಬಹುದೆ ಹುತ್ತದ ಡೊಂಕಿಲಿ
ಕರಿಯು ಬಸವುಗನ ನಡೆ ನುಡಿ
ಪರಮಾತ್ಮಗೆ ಪುರುಷವಾಗಿ ಸರಿಯಾಗಿಹುದೈ ೧

ಖೇಚರದೊಳಾಡುವಾಟವ
ಭೂಚರರುಗಳರಿದೆನೆಂಬುದು ಅಸದಳವಲ್ಲವೆ
ವಾಚಾಳಿಕರಿಗೆ ಸಲ್ಲದು
ಮಾತಿನ ಬಹುಮಾಲೆಯನ್ನು ನಿಜಾತ್ಮನೆ ಬಲ್ಲನು ೨

ಬಲ್ಲೆನೆಂದೆಂಬ ಭ್ರಷ್ಟರು
ಬಲ್ಲವಿಕೆಯ ಹೇಳಿ ನಿಮ್ಮ ಕೊಲ್ವ ಕಾಲಕಾಮನ
ಬಾಧೆಯನರಿಯದೆ ಅಲ್ಲಲ್ಲಿಗಿಚ್ಛೆಪಡಿಸುತ ಮೆಲ್ಲನೆ
ಒಂದೊಂದು ಕಾಸತೆಗೆವುದು ಅದು ಬಲ್ಲವಿಕೆಗಳೆ ೩

ನರಕಿಗಳ ಇಚ್ಛೆಗಾಡುವ
ನರನೆ ನಾ ಮುನ್ನ ಸತ್ತನರಕಿಗಳಂದದಿ
ಕರಿಯಬಸವುಗನ ಕಾಲೊಳು
ಪರಮಾತ್ಮನು ನಿತ್ಯನೆಂದೆಂಬ ಬಿರಿದಂ ಕಟ್ಟಿದಂ ೪

ದೇವ ದಾನವರಿಗಾಸೆಯು
ದೇವರೆ ನೀನೊಲಿದು ನನಗೆ ಬಹೆನೆಂಬಾಸೆಯು
ಮಾನವರಿಗೆ ಧನದ ಆಸೆಯು
ದೇವನು ಪರಮಾತ್ಮ ಎನ್ನಮೇಲಣ ಆಸೆಯು ೫

ಅಶನ ವ್ಯಸನಕ್ಕೆ ಹಾರುತ
ಕುಶಲದ ಮಣಿಗಳನು ಇಟ್ಟು ಮೆಯ್ಯೊಳು ಬೂದಿಯ
ಪೂಸಿ ಆ ಬಸವನಪರಿಯೆಂದು
ಬಗುಳುವ ಹುಸಿಹೊಲೆಯರಿಗೆತ್ತಿ ತಂದೆ ಪೊಸಗರಗಸವಂ ೬

ಶಸ್ತ್ರವನು ಪಿಡಿದು ಕರದೊಳು
ವಿಸ್ತರಿಸುವ ವಿಷಯವೆಂಬ ಶೆಪ್ಪವ ಬೋಳಿಸಿ
ನಿಶ್ಚಿಂತನಾದ ಮಹಿಮಂಗೆ
ಈ ಶೆಪ್ಪಗಳಿದಿರಪ್ಪವೆ ಕೇಳಿ ನೀಃಪುರುಷಂಗೆ ೭

ಸತ್ಯರುಗಳ ಕಥೆಯನೋದುತ್ತ
ವಿಸ್ತರಿಸುವರು ತಾವು ಭಕ್ತರೆಂದು ಭಕ್ತಿಯ ಭಾವವನರಿಯದೆ
ಭಕ್ತನ ಪರಿಯಂತಿಹುದಾಯೆಂ,
ದೆತ್ತಿದೆ ಹೊಲೆಯರ ಮೂಗ ಕೆತ್ತುವ ಬಾಚಿ ೮

ಗುರು ಉಪದೇಶವಿಲ್ಲದೆ
ಲಿಂಗದ ನೆಲೆಯ ಕಾಣದೆ ಜಂಗಮದ ಹೊಲಬ ತಿಳಿಯದೆ
ಅಂಗದ ಹಂಗು ಹರಿಯದೆ
ಜಂಗುಳಿ ಪಶುಗಳಿಗೆ ಕಟ್ಟಿದ ಹುರುಡಿನ ಕಲ್ಲೆ ೯

ಕುಂಜರ ಗುರು ಕಲಿಬಸವುಗನು
ನಾಜುರಿಯಂ ನಂಜುಗೊರಳ ವೀರವಸಂತನು
ನಂಜಿಗೆ ಅಭಯವನಿತ್ತಭವಂ
ಸಂದೇಹವು ಬೇಡವೆಂದ. ಸತಿಕುಲತಿಲಕಂ ೧೦

ಹತ್ತಿ ಹಂಗರಿದು ಭರದಿಂ
ಒತ್ತಿ ಮಹಾಉರಿ ಮಧ್ಯಾನದಿ
ಹಸ್ತದ ವಿಶಾಸಲವೆಣ್ಣನ
ಚಿತ್ರದ ಪ್ರಮಥಗಳ ನೆಗ್ಗೊತ್ತುತ ನಿಂದಂ ೧೧

ಉಟ್ಟನು ಪುಲಿದೊಗಲ ದಿಟ್ಟ
ಕಟ್ಟದ ಕಡುಹದಿರ ಹೊಕ್ಕುಳ ಘಂಟೆಯು
ಇಟ್ಟನು ಪಣೆಯೊಳಗೆ ತಿಲಕವ
ಕುಟ್ಟಿದ ಪಾಪಸವದಿರ ಬಸವಕುಮಾರ ೧೨

ಸಂಚವೇಷದಲಿ ಶಂಕರ
ಸಂಚಿಯರನು ಕೂಡಿನಿಂದ ಮಿಂಚುಗಳಂದದಿ
ಸಂಚರಿಸಿತು ಮಹಾ ಪಾಪ ೧೩
ಜಗದೊಳೆಲ್ಲು ನಿಲ್ಲಲಿಂಬಿಲ್ಲ

ಜನಿತೊಡೆ ಯೋನಿಮಧ್ಯದಿ
ಆ ಮಹಾಪರಮಾತ್ಮನೆಂಬ ಪಾರಿವಾಳದ ಪಕ್ಷಿಯು

ತಾನುಂಡಂ ತನ್ನ ಪತಿಗೆ
ಜೇನಂ ಗಂಟುಕಿತ್ತ, ನಂಜಿ ಮಹಾ ಅಪರಂಜಿ ೧೪

ಹಣ್ಣ ಕೊಟ್ಟೇನೆಂದು ಬಸವನು
. . . ಗಳಂತೆ ತೋರಿ ಅವರಿಗಿತ್ತು . . . ಗಿರ್ಪನು
ಚೆನ್ನಯ್ಯನೆಂಬ ಹಣ್ಣಂ
ತನ್ನವರಿಗೆ ಕೊಟ್ಟು ಕೊಂಡಂ ಸವೆದುಂಡಭವಂ ೧೫

ಸ್ಯಂದನವು ಹದಿನಾರು ರಾಜ
ನಂದದ ಗಾಢದ ಗವಂಕುಳ್ಳ ರಾಯಕುಮಾರನ
ಎಡದಲಿ ನೋಡುತ್ತ ಕುಳಿತಿಹಳು
ನಂಜಿ ಆಡಿದಾ ರಸಮಯದಲ್ಲಿ ಖಂಡಿತ ಅಂಕತಿಗಳಂ ೧೬

೬೪

ಕಂದ ಪದ್ಯ

ಆನೆ ಮದವೇರಿ ಬೀದಿಯೊ
ಳಾನಂದದಿ ಬರಲು ಕಂಡು ಶ್ವಾನನು ಬೊಗಳಲು ಮಹ
ಜ್ಞಾನಮದ ಶರಣ ಬರುತಿರೆ ಈ
ಮಾನವರುಗಳೆಲ್ಲ ಬಗುಳಲದೇನೆಂದರಿಯನು ೧

ಶ್ವಾನ ಬಗುಳಿದರೆ ಆನೆಗೆ
ಹೀನತನವು ತನಗೆಂದು ತಾನೆ ನಾಯಿಗಳಂದದಿ
ಆನೆ ಬಗುಳವದೆ ಕೇಳಿರೊ ಮಹ
ಜ್ಞಾನ ಮದಕರಿಯು ಬಸವನದೇನೆಂದರಿಯನು ೨

ಮರ್ತ್ಯದ ಮರವೆಯು . . . ರದೊಳು
ಅರ್ತಿಯೊಳು ಅರಸು ತನ್ನ ಮದಕರಿಯೇರಿಯು
ಬಿತ್ತರದ ಕೇರಿಕೇರಿಯ
ಮೊತ್ತದ ನಾಯಿಗಳ ಬೊಗುಳಿಸುತಲಿ ಬಂದಂ ೩

೬೫

ಕಂದ ಪದ್ಯ

ಬಡವ ಬ್ರಾಹ್ಮಣ ಮಗನು
ದೃಢಗಲಿ ಚತ್ರರಾಯ ಕುಮಾರನು
ಒಡಗೂಡಿ ಬಂದು ನಿಂದನು
ಕಡುಗಲಿ ವಸವಂತನಾಳು ಕರಿಯ ಬಸವುಗನಂ ೧

ದೆಸೆ ಕಟ್ಟಿ ಕಟ್ಟಿ ಬಸವನು
ಪೊಸತಾಗಿಯೆ ಬಂದು ನಿಂದ ಧೀರೋದಾರನು
ಅಸಮಾಕ್ಷ ಕರಿಯಬಸವನು
ಕುಶಲಿಗಳಿಗೆ ತೋರಬಂದ ನಿಷ್ಕಲರೂಪನು ೨

ಆತ ವಸವಂತರಾಯನು
ಕಾತುರ್ಯಾದಿ ಬಂದು ನಿಂದು ಕಂಬವ ನಟ್ಟಿ
. . . ಪ್ರೇತು ಭೂತಕೆ
ಐತಳವನಿತ್ತು ಹೇಳ ಬಂದ ಊಳಿಗದವನಾನೈ ೩

ರಂಗಪಟ್ಟಣದಲ್ಲಿ ತೊಲಗದ
ಕಂಬವನು ನಟ್ಟಿಂದು ಕರಿಬಸವುಗನಂದ . . .
. . . . . . . . .
. . . ಗಭಯವಿತ್ತನು ಆತ್ಮಲಿಂಗ ವಸವಂತನು ೪

ಮೆಚ್ಚಿ ರಂಗಪ್ಪಗಭಯವಿತ್ತನು
ಪರಮಾತ್ಮನೆಂಬ ಪರಮಾತ್ಮನೆಂಬ ವೀರವಸಂತನು
. . . ಚಿಂತೆಯಿಹನು
ಮನದೊಳು ಚುಚ್ಚಿ ಕಥನಗಳನು ಬಿಟ್ಟು ನಿಚ್ಚಟನಾಗಿರು ೫

ಮೀಳೆಯುವ ಇತ್ತು ಭೂತಕೆ
. . . ಬಸವ ಊಳಿಗದ . . . ಹೇಳುವರೆ ಬಂದೆ ಒಸಗೆಯ
ಪೇಳಯ್ಯ . . .
. . . ಗಪ್ಪ ಆತ್ಮಲಿಂಗ ವಸಂತನು ೬

೬೬

ರಾಗ ॥ ನಾದ ನಾಮಕ್ರಿಯೆ

ಮುನ್ನ ಬೆಳೆದ ಬೆಳೆಯ
ಇನ್ನು ಬೆಳದನೆಂಬ ಹಮ್ಮು ಬಿಮ್ಮುಗಳು ನಿಮಗೇತಕೆಲವೊ
ಚೆನ್ನಬಸವೇಶ್ವರನು
ಬೆನ್ನೊತ್ತಿ ಬರುತವನೆ ಸಾರಿರೆಲೊ ಉಳಿದವರನು ೧

ಏಳುನೂರೆಪ್ಪತ್ತಯೇಳಕ್ಕೆ ತಾ ಬಂದ
ಎಮ್ಮ ಶರಣರ ಮಗನು ಚೆನ್ನಬಸವ
ಚೆನ್ನಬಸವೇಶ್ವರನು ಷಣ್ಮುಖನು ಗುರುಬಸವ
ನಮ್ಮಯ್ಯ ತಂದ ನಮ್ಮವರಿಗೆನ್ನನು ೨

ನಾ ನುಡಿದ ನುಡಿಗಳನು ತಾ ನುಡಿದನೆಂಬಂತ
ಹೀನಮಾನವಗಳಿರ ಅರಿಯಿರೆಲವೊ
ನಾನೆಂಬುದೆ ಗೊಡ ಗುಹೇಶ್ವರಲಿಂಗ
ನಾ ನುಡಿವ ನುಡಿಗಳನು ಕೇಳಿರೆಲವೊ ೪

ಹದಿನೆಂಟುನೆಜ್ಜೆವು ಕೂಡಿ ನಡೆಯಿತು ಕೇಳಿ
ಹರಭಕ್ತ ಮಡಿವಳಮಾಚಯ್ಯನು
ಹರಿಯ ಶಿರವನರಿದು ಶರಭವೀರಣ್ಣನನು
ಬಿರುದೆತ್ತಿ ಸಾರಿದನು ಬಿನ್ನಪವನು ೪

ಹದಚೆಟ್ಟೆಗೊಡದಿದೇನುಸುರಿ ಉರಿದೆ
ಧರೆಯೊಳಗೆ ಗುರು ಗಂಗಾಧರಲಿಂಗ
ಮಳೆಯು ಧರಣಿಪ ವೀರವಸವಂತ
ರಾಯನು ಶರಣ ಗುರುಬಸವೇಶನಾಣೆ ೫

ಕೋಟಿ ಕೋಟಿ ಹದುಗಿ ಬಿದ್ದು ಧರಣಿಯ ಕೂಡಿ
ಹೇಸಿಗಳು ಕಡಿದಾಡಿ ಮಡಿವುತಿದಕೊ
ಕೋಟೆಗಟ್ಟಿಸಿತುಯೆಂದು ಬಾಕಿತಿಟಹುದು
ಹೇಸಿಮಾನವಗಳಿರ ಅರಿಯಿರೆಲವೊ ೬

ದಾಂಟಿ ಗುರುಸಿದ್ಧಲಿಂಗನು ಪೇಳ್ವ
ಗೊಂಬೆಯಶಾಟ ಮುನಿಯಿಂದು ಕಾಣಿರೋ
ಕಡೆಸುಟ್ಟ ಓಲೆಯಿಂದು ಕಾವವರಿಗಳವಲ್ಲ
ಕಲಿಭಕ್ತ ಕಲಿಕಾಮದೇವರಾಳು ೭

. . . . . . . .
. . . . . . . .
[ಕಲ] ಕೇತ ಶರಣರು ಒಲಿದೆನ್ನ ತಂದಿಹರು
ಕಲಿಯ ತುಳಿದಿಹ ಕಾಳ ಬಸವನೆಂದು ೮

ಕಾಳ ಬಸವನ ನುಡಿಯು ಕಾಮುಹರಗಳವಲ್ಲ
ಕಾಲಾಗ್ನಿರುದ್ರ ಕಲ್ಲೇಶಲಿಂಗ . . . .
. . . . ಕಾಲಾಂತಕನು ಕಲಿದೇವರಿಗೆ
ದೇವ ತಾ ನುಡಿದುದಲ್ಲದೆ ನಡೆದುದಿಲ್ಲ ೯

೭೬

ರಾಗ ॥ ಆಹರಿ

ಸೂಳೆಗಾರಿಕೆಯ ಮಾಡಿದನು
ಪೇಳಿ ಸೂಳೆಗರುಹಿದ ನಿಮ್ಮ ಸುಗುಣವಿಟರನ್ನ ॥ ಪಲ್ಲ ॥

ಬಾಲಲೀಲೆಯೊಳಾಡಿ ಸೂಳೆಗಾರಿಕೆಯ ಮಾಡಿ
ಕಾಲ ಕರ್ಮದ ಗಂಡ ಕರಿಯ ಬಸವಲಿಂಗ
ಕಾಮಿನಿಗೆ ಕಾಮುವನಾ . . . ನುಯಿದ . . . . ಪಸು
ಅಪ್ರತಿಮ ಲಿಂಗದೊಳು ಸೂಳೆಗಾರಿಕೆಯ ಮಾಡಿದನು ೧

ಅಪ್ರತಿಮ ಘನಲಿಂಗವೆಂಬ ಒತ್ತೆಯನಿತ್ತು
ಮಚ್ಚರಿಪ ಸೂಳೆಯರ ಕಂಡ ವಿಟರಾಜ
ನವಕಪ್ಪುರದ ಉರಿ ಕರಿಯ ಬಸವ
ಆವನ ವಿಸ್ತರಿಪರಳವೆ ವಿಪರೀತ ಮಹಾಮಹಿಮ ೨

ಒಂದೆರಡು ಮೂರು ಜೋಡೆಂಬ ಕೋಲನ್ನಿತ್ತು
ಸಂದೇಹಮಂ ಕಳಿದು ನಿಂದಕರ ಎದೆಗೊಂತ
ಬಂದುಬೆಯ ಚುಂಬನವಮಾಡಿ ಕೂಡಿ
ಒಂದಾಗಿ ನಿಂದ ಕಾರಣಿಕ ಕರಿಬಸವ ೩

ಭವಹರಿಯು ಭವಹಾನಿ ಭ್ರಮರಾಂಬಿಕೆಯ ಕೇಳು
ವಿವರಿಸುವರಳವಲ್ಲ ಪ್ರಭುಲಿಂಗಲೀಲೆಯೊಳು
ಭ್ರಮರಾಂಬಿಕೆಯೊಳ್ನಿಂದ ಚಂದ
ಅದರ ಚಂದವನು ವಿವರಿಸುವರಳವೆ ಬಸವೇಶ ೪

ಸೂಳೆತನ ಹೋಯಿತ್ತು ಸುಗುಣತನವಾಯಿತ್ತು
ಜಾಣತನ ಘಟಿಸಿತ್ತು ಜನನ ಮರಣಗಳೆಂಬ
ನಾಮವಡಗಿತು ಲಿಂಗದೊಳಗೆ
ಜಾಣರಿಗೆ ಜಾಣ ದೇವ ಗುಣಮಣಿ ಕರಿಯಬಸವ ೫

ಮಾಯಕೋಲಾಹಳ ಮನು ಮುನಿಗಳಿಗೆ ವಂದ್ಯನು
ರಾಯಕುಮಾರ ರಾಜ್ಯವನಾಳಬೇಕೆಂದು
ಆ ಮಹಾ ಐರಾವತವನೇರಿ ನಿಂದು
ರಾಯ ರಾಜೇಂದ್ರನೆಂಬ ಪೆಸರಾಂತನು ೬

ಈ ಕಲಿಯುಗವ ಕಳಿದು ಏಕವುಯ . . .
ಏಕೋದೇವನೆಯೆಂದು ಏಕಾಂತರಾಯ
ರಾಜೇಂದ್ರನಿಂದು ಈ ಪರಿಯಲಿ
ಇಪ್ಪತ್ತೊಂದು ಸಾಹಸ್ರಯುಗ . . . ನೆಂದು ೭

ಶ್ರೀಮನ್ಮಹಾರಾಜ ರಾಜೇಂದ್ರನು
ಶ್ರೀಮನಹಾದೇವ ದೇವತತಿ ವಂದ್ಯನು
ಶ್ರೀಮನ್ಮಹಾದೇವ ಭಕತ ಚೆಲ್ವ
ಶ್ರೀಮನ್ಮಹಾದೇವನು ವಸವಂತ ೮

೭೮

ರಾಗ ॥ ಕಲ್ಯಾಣಿ

ಮಾನಿನಿ ತಂದು ತೋರೆ . . . ವಿನೆಯನ
ಮಾನಿನಿ ತಂದು ತೋರೆ ತಂದೊಡ
ನೀವೆ ಈ . . . ಗೊಂದಾಗಿ ಉಚಿತವ
ಮಾನಿನಿ ತಂದು ತೋರೆ ॥ ಪಲ್ಲ ॥

ಅಂಗುಲಿ ಮುಂಗುರುಳ ಪ್ರಾಣೇಶಗೆ ತಲೆವಣೆಯು ನಿನ
ಗಂಗನೆ ಚೆಂದುಟಿ ಅವಗೆ ಚೆಲ್ವಿನದೊಂದು
ರಂಗುಮೂಗಂತಿ ಮುತ್ತು
ರಮಣಿ ನಾ ನಿನಗಿತ್ತ ೧

ಕಾಣಿಕೆ ವೃತ್ತಕುಚ ಅವನ ಕರ
ಪಾಣಿಗಳವರೆಡೆಯು ವರ ಮುನ್ನೀವೆ ನಿನಗಿಂದು
ಮಾಣಿಕ್ಯ ಮಾಲೆಯು
ಮಾಣದೆ ಮನಬಂದು ಮುಮಂತೆಯೊಳೆನಗಿಂದು ೨

ಅಂಗವರ್ಣವನಾತಗೆ ಉಟ್ಟ ಸೀರೆಯು
ಲಿಂಗದೀವನು ನಿನಗೆ
ಭೋಗಲಿಂಗ ಬಂದೊಡರರಿಸಂಗ ಸುಖದಪುಣ್ಯ
ಅಂಗನೆ ನಿನ್ನದು ಆ ಸುಖಯೆನ್ನದು ೩

೭೯

ರಾಗ ॥ ಆಹರಿ

ಪಾಪವಡಗಿತು ಪ್ರಳಿಯು ಬಂದು
ಉಮಾಪತಿಯು ಭಲರೆಂದು ಸಾರಿದಳು ನಂಜಿ ॥ ಪಲ್ಲ ॥

ಸ್ಥೂಲ ಸೂಕ್ಷ್ಮಕಾರಣನಂದಮ ಕಡಿದು
ಮೇಲೆನಿಪ ಜಾಗ್ರ ಸ್ವಪ್ನ ಸುಷುಪ್ತಿಗಳಿಂದ
ಕಾಲಕರ್ಮದ ಗಂಡನೆಂದು
ತಾನೆ ಕರುಣದಿಂದವಳು ಕರಿಯಬಸವಿ ಕರುಣೆಯನು ೧

ಶನಿವಾರ ಅಮಾವಾಸೆ ವನಕಾವಳವಾಗಿ
ಘನಮಹಿಮ ನಿನ್ನ ಕಾಣದೆ ಪಂಕದೊಳು ಬಿದ್ದ
ನನಗೇನುಪಾಯವೆಂದೆನಲು
ನಿನ್ನ ಮನನಾಯಕನು ಬಿದಿಗೆಚಂದ್ರ ಮೂಡಿದನು ೨

ಮನವನೆಳವಂದೂರ ಕೋಂಟೆ ಮುತ್ತಿಗೆ ಮಾಡಿ
ಘನಮಹಿಮ ಕಡಿದು ಕೋಂಟೆಯ ಒಳಪೊಕ್ಕು
ನಂಜಿಯಮ್ಮನವನೆಲ್ಲವ ಸೂರೆಗೊಂಡು
ಅವಳಿತ್ತ ಸುಖವ ತನ್ನೊಶ ಮಾಡಿ ಚೆನ್ನದಣಾಯಕನು ೩

ಊರ ತೋರಣಗಟ್ಟಿ ತೋರಬಂದೆನು ನಾನು
ತೋರುವೆನು ನನ್ನ ಶಕ್ತಿಯ ನನ್ನವರಿಗಿದು
ಸಾರಿ ಹಾರೈಸಿ ನಿಂದವಗೆ ಶರಭ
ವೀರಕರಿಬಸವ ಮಹಾಶಕ್ತಿಯಾದುದನು ೪

ಇಮ್ಮೃಮಾನಿನಿಯ ಕರೆತಂದು ಮೀಯ
ವ ಮಾಡಿ ಕಾಸೆಯನುಡಿಸಿ
ಕರಿಬಸವರಾಯ ಮಹಲಿಂಗದೊಳು
ನಿಂದು ತಾನುತಾನಾದ ತಳಕಾಡ ಮಾಡಿದನು ೫

ಮತ್ತೆ ತಳಕಾಡಿಂದ ಮೈಸೂರ ಹೊಗಲಿಲ್ಲ
ಅಪ್ರತಿಮ ಗುರು ಕರಿಯಬಸವರಾಜನು ನುಡಿದ
ಚಿತ್ತತಾಮಸವ ಹೊಗಲಿಲ್ಲ ೬
ಎಂದು ಅಪ . . . ಅಗ್ನಿಯೊಡ ಹಾಕಿದನು

ಬಾವಿ ತಡಿಯ ಶಿಶುವು ಬಾಣತಾಗಿದ ಮೃಗವು
ಕೋವಿರಂಜಕತಾಕಿದ ಅಗ್ನಿ ತಾಳುವದೆ
ಭಾವಕಿಯ ಮನವು ನಿಂದುರಿದು ಬ್ರಹ್ಮಾಸ್ತ್ರ ೭
ವಾವರಿಸಿ ಭಜನೆಮೋಡಿದುದನೇನೆಂಬೆ

ನನ್ನ ನಿನ್ನಂತೆ ನೀ ಮಾಡದಿರ್ದಡೆ ಬಸವ
ನಿನ್ನ ಮೀಸೆಯು ಎನ್ನ ಶೆಪ್ಪವೆಂದಾಡಿದಳು

ಎನ್ನ ಮನವೆ ಸಾಕ್ಷಿಯಾಗಿ
ನುಡಿದ ಹೆಣ್ಣ ವಿಶಾಸಲ ಮಾಡಿದುದೆಯೆನ್ನ ವಿಶಾಸೆ ೮

ಛಲದಿಂದ ಚಂದ್ರಶೇಖರ ಬಸವ ಸೂಳೆಯಂ ಕುಲಗೆಡಿಸಿ
ಸಗುಣ ನಿರ್ಗುಣನೆಂಬ ಚಳೆಯಂ ಮಾಡಿ
ನಿರ್ಮದ ನಿಜವನವಧರಿಸಿ
ಅವಳ ಹೊಲೆಯು ತೀರಿಸಿ ಹೋಗು ಹೊಲತಿಯೆಂದೆನಿಸಿ ೯

ಪಗಡೆಯನ್ನಾಡಿ ಸೋಲಿಸಿ ನಂಜಿಯಂ
ಮೂಗಕವಡೆಯಂ ಕಟ್ಟಿ ಕರಿಬಸವ ಚೆ
ನ್ನಗನೆಂಬ ನಿರುತ ನೀರಂ ಹೊರಿಸಿ ಮನೆಗೆ ಅವಳ
ಪಗಡೆ ಪಂಥವ ಬಿಡಿಸಿದು ಗಡ ನಂಜಯನು ೧೦

ಶ್ರುತಕೆ ಸೋಲದ ನಂಜಿ ಮತಿಗೆಟ್ಟು ಬ್ರಹ್ಮಾಂಡ
ಕತಿಶಯದ ಕೊಲೆಯಂ ಕೊಲಿಸಿ ನಾನಿನ್ನು
ಸತಿಗೆ ದೃಷ್ಟ ಹೇಳಿದೆನು ಅವಳ
ಮತ ಶಿಶುವ ಮಾಯಮರ್ದಿಸಿ ಮೂಗನರಿದೆ ೧೧

ಹಂದಿ ಸೂಕರ ನಂಜಿಗಾನಂದವಂ ಬೀರಿ
ನಂದಿಯಂ ಮಾಡಿ ಧ್ವಜವೆತ್ತಿ
. . . . ಕಿಗ . . . . ಭಲರೆ
ಕಂದ [ಕರಿ]ಗೊರಳ ಬಸವ ಕರಿಬಸವ ಉರಿಬಸವ ೧೨

ಕ . . . . ಬ ಹಗರಣದ ಹಬ್ಬದೊಳು ನಂಜಿ . . . .
ತೆಗದು ಬಗಿಯೊಳು ಕಟ್ಟಿ ಕರುಣರಸವಂ ಬೀರಿ
ಅಗಣಿತ ಕರಿಯು ಬಸವರಾಜ
ಹಗರಣದ ಹಬ್ಬಕ್ಕೆ ನಿಂದ ಮಹಾ ಚಂದ ೧೩

ಶುಕ್ಲ ಸಂವತ್ಸರದ ಪಕ್ಷ ಪ್ರಮಾದೀಚ
ಶುಕ್ರವಾರವು ಸೂರ್ಯನುದಿಸೆ ಬೆನಕನ
ಚೌತಿ ಭಿಕ್ಷಾಟನಕೆ ಮೊದಲೆ ನಿಂದ
ಧರಣಿಗಪ್ರತಿಮ ಗುರು ಕರಿಯು ಚೆನ್ನಬಸವ ಚೆನ್ನಿಗನು ೧೪

ತ್ರುಲಂಲಿತು ನಂಜಯಂ ಹುಲ್ಲ ಹಂಳು . . .ವರು
ಅಲ್ಲಿಗಲ್ಲಿಗೆ ಚಾಂಗು ಭಲರೆಂದು ಬ್ರಹ್ಮಾಂಡ
ಮುಲಮುಲನೆ ಮುತ್ತಿ ತಾವೆಲ್ಲ ಅವರ
ಚೆಲ್ಲ ಒಡಿದನು ನಮ್ಮ ಚಂದ್ರಶೇಖರನು ೧೫

ಷೋಡಶವ ಹದಿನಾರು ಕಡೆಯು ವಚನವ
ಮಾಡಿ ಆದಿಯು ತೋರಿ ಅಪ್ರತಿಮಘನಗುರುಸಿದ್ಧ
ರಾಜಶೇಖರ ಬಸವರಾಜ
ಈ ಪರಿಯಲಿ ನಿಂದ ಇಪ್ಪತ್ತೊಂದುಸಾಸ್ರಯುಗವಾಳ್ವನಿಂದು ೧೬

೭೦

ರಾಗ ॥ ತೆಲುಗ ಕಾಂಬೋದಿ

ಕಾಂತೆ ಕೇಳೆನ್ನದೊಂದು ಪಂಥದ ಮಾತ
ಲಾಲೈಸಿತ್ತಯೆನ್ನೆಡೆಗೆ ಬಂದಯಿಂದುಮುಖಿಯೆ ॥ ಪಲ್ಲ ॥

ಪಲವನರಿಯೆ ಕಾಣೆವಾ . . . ದಂದಿನಿಸಿಲ್ಲ
ಚೆಲುವ ನನ್ನೆಡೆಗೆ ಬಂದ ಇಂದುಮುಖಿಯೆ
ಛಲವ ಬಲಿದು ತಾನೆ ಕಲೆನೆಲೆಗಳ ತೋರಿ
ಒಲಿದು ಎನ್ನೆಡೆಗೆ ಬಂದ ಇಂದುಮುಖಿಯೆ ೧

ನರಸಿಂಹ . . . ಅರಿಯೆನೊಂದಿನಿಸುವ
ಗ . . . ವಾಯೆನ್ನೆಡೆಗೆ ಬಂದ ಇಂದುಮುಖಿಯೆ
ಶರಣಮರ್ದಿಸಿ ತಾನೆ ಸಕಲಕಲೆಗಳನು
ಅರುಹಿಯೆ ಕಡೆಗೆ ಬಂದ ಇಂದುಮುಖಿಯೆ ೨

ಮನವನೊಂದೊಂದುಗೂಡಿ ಕರುಣರಸವ ಬೀರಿ ನೋಡಿ
ಘನ ಹರುಷವಾಳೆನಾಗೆಯಿಂದುಮುಖಿಯೆ
ತನು ಉಬ್ಬಿ ಪುಳಕವುಯೆನಗೆ ನಿಲ್ಲದೆ ನಾನು
ಘನಶಾಂತನಪ್ಪಿಕೊಂಡೆನೆ ಇಂದುಮುಖಿಯೆ ಕಾಂತೆ ಕೇಳೆನ್ನದೊಂದ ೩

೭೧

ರಾಗ ॥ ಕಾಂಬೋದಿ

ಎಳೆದು ತಹೆ ಎಳಗನಂದದಲಿ
ನೋಳ್ಪರಳವಲ್ಲ ಎನ್ನ ಮಹಾ ಶಕ್ತಿ
ಕಳೆದೋರುತಿಹೆ ಚಕ್ರವರ್ತಿ ೧
ಸೂಳೆಯೆಳೆದು ತಹೆ ಮುಂದಲೆಯನೆತ್ತಿ

ಮುಂದಲೆಯುವಿಡಿದಂತರಂಗ
ಸರ್ವಜ್ಞಲಿಂಗಾರ್ಪಿತವೆ ಶರಣೆಯುಂಗ

ಅಂಗವಾಯಿತು ಜಯಚಕ್ರಪಾಂಗ
ಎನ್ನ ಸತ್ತಿರದಾಯಿ ವೇಶ್ಯಾಭುಜಂಗ ೨

ವೇಶಿ ಕರವೆತ್ತಿ ಜಯವೆನಲು
ಬ್ರಹ್ಮಸೂಸಿತ್ತು ಕರ್ಮನಿರ್ಮಲವು
ವೇಶಿ ಪತಿವ್ರತದಲ್ಲಿ ನಿಲಲು
ಮೂರುಲೋಕವೆಲ್ಲವು ಸೂರೆಯೆನಲು ೩

೭೨

ರಾಗ ॥ ತೆಲುಗ ಕಾಂಬೋದಿ

ಬಲದ ಭುಜ ಹಾರುತಿದೆಯೆನಗೆ
ಬಯಸಿದನುಕೂಲವಾಯಿತಿಂದೆನಗೆ
ಪ್ರಳಯ ಬಂದಿತು ಪಾಪಿಗಳಿಗೆ
ನಿಜವು ನೆಲಸಿತೆನ್ನವಳೊಳಗೆ ಲೀಲೆ ೧

ಈಕೆ ಪುಟ್ಟಿದಳು ಎನಗಾಗಿ
ಅನೇಕ ಭವಭವದೊಳಿರಲಾಗಿ
ನಾ ಕಂಡು ನನಗೆ ಬೇಕಾಗಿ
ಭೂಲೋಕವರಿಕೆಯ ಮಾಡಲಾಗಿ ೨

ಅಂಬೆಗಾಲಿಟ್ಟಾಡುವಾಗ
ನಿಂದು ಒಂದೊಂದು ಹೆಜ್ಜೆ ಇಡುವಾಗ
ಲಜ್ಜೆ ಬಂದು ಸೀರೆಯನುಡುವಾಗ
ನನಗೆಂದು ಬಯಸಿರ್ದ ಆವಾಗ ೩

ಇಂದಿಗೊಂಬತ್ತೂರುಷದಿಂದ ಬೆರಸಿ
ನಂಜಿಯನು ಕೂಡುವಾನಂದ
ಚಂದವಾಯಿತು ಚದುರಿನಿಂದ
ಒಲಿಸಿಕೊಂಡೆ ಭಲಭಲರೆ ಬಸವೇಂದ್ರ ೪

ಶ್ರೀರಂಗಪುರವರಧೀಶ
ರಂಗರಾಮ ರಘುನಾಥನೆಂದೆನಿಸಿ
ಶ್ರೀನಂಜ ಕಾವೇರಿ ಮಧ್ಯೆಯೊಳಗೆ
ತ್ರಿಯಂಬಕೇಶನಾಡಿದನು ೫

ಅವನಾಡಬೇಕಾಗಿ ಕೂಡಿದನು
ಅನಾದಿ ಅಪ್ರತಿಮಜಂಗಮವು

ಈ ಮೂಢಮಾನವರ ತಿಳಿಯುಗನು
ಕೊಂಡಾಡು ಕೋವಿದಳೆಯೆನುತಿಹನು ೬

ಪನ್ನಗಧರನ ಹಾಡುವಳು ಭಲರೆ
ಕುನ್ನಿಮಾನವರರಿಯಂದಿಹಳು
ಚೆನ್ನಿಗನು ಕರಿಯುಬಸವುಗನು
ಪೇಳ್ವ ಚೆನ್ನ ನಂಜಿಯುನ ಸಾಹಸವದು ೭

ಲಿಂಗದಲಿ ಕಾಸೆಗಟ್ಟಿಹನು
ಮಹಲಿಂಗವೆ ತಾನಾಗಿಯಿಹನು
ಭಂಗಭವಿಗಳನು ತುಳಿಸುವನು
ಮುದ್ದುನಂಜಿಯೊಳಗೊಲಿದಾಡುತಿಹನು ೮

ತತ್ತರಿ ಕುತ್ತ ಕಿಕಿಕಿಣಿಯೆನುತ ಪರ
ತತ್ವಗಳ ಹಳಿದು ತುಳಿವುತ
ಅಪ್ರತಿಮನಲ್ಲದಿಲ್ಲೆನುತ ನಿಂದು
ಮುಕ್ತಿಯಿಂದತ್ತವೀರುತ ೯

ಹೇಳಲಳವಲ್ಲ ಬಾಲೆಯೊಳು
ಒಲಿದ ಭಾವ ಬಂದರೆ ಭಕ್ತಿಗಳು
ಮೇಳೈಸಿ[ನಿಂದ]ಳು ದಾರಿಯುನು ಕೂಡಿ
ಕಾಳಿಯಾಡಿದ ಕಲಹವನು ೧೦

೭೩

ರಾಗ ‖ ಕೇತಾರಗೌಳ

ಎಂತು ಪೊಗಳುವೆ ಎನ್ನ ಪ್ರಾಣಕಾಂತೆ ನಂಜಿ[ಯು]ನು
ನಿಶ್ಚಿಂತ ನಿರಂಜನವಾದ ಜಾಣೆ ಎನ್ನಾಣೆ ‖ ಪಲ್ಲ ‖

ಹೆಣ್ಣುಗಳರಸಿ ಕನ್ನೆವೆಣ್ಣು ನಂಜಿಯುನ್ನು ೧
ಬಣ್ಣದುಟಿಯಿರಲು ಬ್ರಹ್ಮಸೂಸಿತ್ತು

ಬಣ್ಣಿಸುವರಳವಲ್ಲ ಬಸವನರಸಿ ರಾಜ ೨
ವೆಣ್ಣು ಜಗದ ಜಡರ ಜರೆದುಂದನು

ಇದು ಗುರು ಲಿಂಗ ಜಂಗಮ ಪಾದೋದಕವೆಂಬನ ೩
ಸದಾ ಬರಿದೊಗೆದ ನಿಶ್ಶಂಕ ಶಂಕಿನಿ

ಮೂದೇವರ ಮುಂದಲೆಯು ಕಟ್ಟಿ ಕಾಲೊಳಗೆ ದುಟ್ಟಿ
ಆದಿಯುದ್ದೊಳಗೆ ನಿಂದು ಅನಾದಿ ನಾಯಕಿ ೪

ಮಾರಿಯು ಮಸಣಿ ದುರ್ಗಿ ಚವುಡಿ ಚಾಮುಂಡಿ ಚಂಡಿ
ಆರಾಧನೆಯು ಮಾಡಿಸಿಕೊಂಡವಳೀಕೆ ೫

ಧಾರುಣಿಯು ಮರ್ಯಾದೆಯು ತರಿದು ರಕ್ತವಸುರಿದ
ಧಾರುಣಿಯು ಪತಿ ಸತಿ ನಂಜಿ ಸುಗಂಧಿ ೬

೭೪

ರಾಗ ॥ ಸೌರಾಷ್ಟ್ರ

ನಂಜಿಗಿನ್ನಣಿ ಕಾಣೆ ನವಲೋಕ ಮಧ್ಯಳೆ
ನಂಜೂ ನಂಜಿ ನಿನಗಂಜಿ ಆ ಸುರಾಸುರ
ಮುನಿಜನಂಗಳು ಓಡೆ ನಂಜು ನಂಜಿ ॥ ಪಲ್ಲ ॥

ಕಂಗೆಟ್ಟು ಕಾಳಿ ಕಂಕಾಳಿ ಮೊರೆಯೊಯೆನೆ । ನಂಜು ನಂಜಿ
ಬಂದು ಕೊಂದು ಬೆನ್ನಟ್ಟುತ ತಿಂದು ತೇಗಿದಳ್ನೀನೆ । ನಂಜು ನಂಜಿ
ಮುಂದಲೆಗಟ್ಟಿ ಮೂರಾರು ಲೋಕವನೆಲ್ಲ । ನಂಜು ನಂಜಿ
ಒಂದುಗೂಡಿದೆ ವೈದ್ಯನರಸಿ ಮಮ್ಮನದೇವಿ । ನಂಜು ನಂಜಿ ೧

ಸಿದ್ಧ ಬಸವ ಧಾರಸದ ಕಾಸೆಯು ಕಟ್ಟಿ । ನಂಜು ನಂಜಿ
ಬಲುಭದ್ರವಾಯಿತು ಭದ್ರಕಾಳಿ ಭವಾನಿಯೆ । ನಂಜು ನಂಜಿ
ಮುದ್ದುಮಾರಿಯೆ ಮುಕ್ತಿದಾಯುಕನಾಯುಕಿ । ನಂಜು ನಂಜಿ
ಮೂರವದ್ದುನೂಕಿದೆ ಸಿದ್ಧನಂ ಜೈಸಿ ಕಾಮ . . . । ನಂಜು ನಂಜಿ ೨

ಹರಿಯು ಕಣ್ಣನು ಕಿತ್ತು ಹರನಕಾಲೊಳು ಮೆಟ್ಟಿ । ನಂಜು ನಂಜಿ
ಚೆಲ್ವೆ ಹರುಷದಿ ಬ್ರಹ್ಮನ ಶಿರವ ಕರದೊಳಾಂತೆ । ನಂಜು ನಂಜಿ
ಧರೆಯು ಮಾನವರುಗಳೇನ ಬಲ್ಲರು ನಿನ್ನ । ನಂಜು ನಂಜಿ
ಗುರುಕರಿಯುಬಸವರಾಜ ಕರದು ಕೊಡಿದುದನು । ನಂಜು ನಂಜಿ ೩

ಚಂದ್ರನ ಬೆಳಗಿನ ಚಂದದ ಮೂರ್ತಿಯು । ನಂಜು ನಂಜಿ
ಚಂದ್ರಶೇಖರ ಚಂದ್ರಧರನ ಕಟ್ಟಾಣಿಯೆ । ನಂಜು ನಂಜಿ
ಚಂದ ಚಂದದ ಬಲು ಚಂದ್ರಗಾವಿಯುನುಟ್ಟು । ನಂಜು ನಂಜಿ
ನಿಜ ಚಂದದಿಂ ಬಿದಿಗೆಯು ಚಂದ್ರನಂತೆಸೆದಿಹ । ನಂಜು ನಂಜಿ ೪

ಕಡಲ ಮಥನದಿಂದ ಕರಿಯು ಬಸವನಾದ । ನಂಜು ನಂಜಿ
ನೋಡಿ ಕಡಿದು ಕಾಲನ ಕೆಡೆವೊದೆದು ಮಡದಿಯೊಳು । ನಂಜು ನಂಜಿ

ಒಡಗೂಡಿ ನೀನೆ ನಾನಾಗಿ ಬಂದೆನು ಮುದ್ದ । ನಂಜು ನಂಜಿ
ಕಟ್ಟ ಕಡೆಯು ಲೀಲೆಯೊಳೊಂದು ಕೊಡೆಯುಲಾಳಿದೆ ಸಿದ್ಧ । ನಂಜು ನಂಜಿ ೫

೭೫

ರಾಗ ॥ ತೆಲುಗ ಕಾಂಬೋಧಿ

ಬಾಹು ಕಟ್ಟಿ ಭಕ್ತದೇಹಿಕ ದೇವಿ
ಭಾವವಡದ ಭಾವ ಹರಿದು
ಹೇಹ ರತಗಳು ವಿಕಾರ ವಿಷಯುವೆಂಬ
ಕೀವು ಹೋಯಿತು ಭವಹಾನಿ ॥ ಪಲ್ಲ ॥

ಅಪ್ರತಿಮ ಆನಂದಲೀಲೆಯು
ಬಿತ್ತಿದೆಯೆನ್ನವರೊಳಗೆ
ಮುಕ್ತಿಯು ವಿಶಾರಿ ಅನವರತ
ಸಾರದಿ ಬಿರಿದೆತ್ತಿ ಕಟ್ಟಿದೆನು
ಕಾಮಿನಿಗೆ ಸತ್ತುಹೋಹ ಸತಿಯರ
ಗಂಡಯೆಂಬ ರತ್ನತೆತ್ತಿದ ಕಾಲಪೆಂಡ್ಯ
ಕಪ್ಪಡಿ ಸಂಗಮೇಶ್ವರಲಿಂಗ ಸಾಕ್ಷಿಯೆಂದೊಪ್ಪಿ
ಕಟ್ಟಿದೆನು ಕಾಲೊಳಗೆ ೧

ನಾಡೊಳಗೊಬ್ಬಳೆಂದಾಡಬೇಡವೊ ಜಡ
ಮೂಢ ಮಾನವ ಜೀವಿಗಳಿರ
ಓಡೆತ್ತಿ ಹುರಿಯು ಬಂದಳು ಕರ್ಮ
ಭವರೋಗ ವೈದ್ಯನ ಮಡದಿವಳು
ಪಾಡು ಪಂಥದ ವೀರನಾರಿ ಶಿರೋಮಣಿ
ಆಡಿದ ಬಾಯಾಡೆಯೊಳಗೆ
ನೀಡಿದ ನಾಲಿಗೆಗಳನು ತೆಗೆದು
ಕಿತ್ತಾಡ ಬಂದಿಹಳಂಗಲಿಂಗಿ ೨

ಕನ್ನೆವೆಣ್ಣಿನ ಮಾನದೊರ್ಮವ
ನೊರೆವುತ್ತ ಚಿನ್ನವರದನಾಗಿ ಬಂದೆ
ಚಿನ್ನವ ಹದಿನಾರು ಬಣ್ಣಕ್ಕೆ ಸರಿಮಾಡಿ
ನನ್ನವರಿಗೆ ತೋರಬಂದೆ
ಮುನ್ನಿನವರೆಲ್ಲ ಕುನ್ನಿಮಾನವರೆಂದು
ಮಣ್ಣಿಣ ಮುಸಿಗೆ ಸರಿಮಾಡಿ

ಚೆನ್ನಿಗ ವೀರಬಸವನ ಪಟ್ಟದ ರಾಣಿ
ಚೆನ್ನನಂಜಿಯೆ ಅಪರಂಜಿ ೩

೭೩

ರಾಗ ॥ ಧನ್ಯಾಸಿ

ಬದ್ಧ ತನುವೆಂಬ ಬಾವುವೊಡೆದು
ಹೇಹ ಬಿದ್ದುದ ನೀಸರಿಯ
ಮುದ್ದು ಮುಖದ ನಂಜಿ
ಸಿದ್ಧಬಸವರಾಜ ಶುದ್ಧೈಸಿದ ನಿನ್ನನು ॥ ಪಲ್ಲ ॥

ಹೀಗೆ ಮರೆದು ಮಲಗುವರೆಂದು
ಮಹಾ ಘನವೀರನು ತಾಟಿ ಬೀಸಿ
ಗಾಜಿನ ಕುಪ್ಪಿಗೆ ಒಡೆದುದ ನೋಡೆಂದ
ಗಾಡಿಕಾರನು ಬಸವ ೧

ಗಾಜು ಬಾಜನೆ ಗೋಜು ನೀಗಿ ನಿರ್ಮಲವಾದ
ಆದಾಯುವ ನೋಡೆಂದ
ಮೂಗ ಕಂಡ ಕನಸಂತಾಯಿತು ನೋಡೆ
ಆಡುವರಳವಲ್ಲವೆ ೨

ದೃಢಚಿತ್ತ ದೃಢಭಕ್ತಿ ದೃಢಮುಕ್ತಿದಾಯಕಿ
ದೃಢನಿಜದಾಂಬಿಕೆಯ
ದೃಢನಿಜದಾನಂದ ಮಡದಿ ಕೇಳೆನ್ನಯ
ಬೆಡಗಿನ ಕನ್ನಡವ ೩

ಎರಡು ತಿಂಗಳೆಂದೆಂಬ ಏಕ ಮುಖದ ನುಡಿ
ಎರಡು ತಿಂಗಳೆಯೆಂದನು
ಎರಡು ಅರುಹು ಮರವೆಂಬವೆರಡನು ಹಾ
ದರುಹಿ ನೀ ಕಳೆಯೆಂದನು ೪

ಮೂರುವರುಷವೆಂದು ನಿನ್ನೊಳಗು ಸೇರಿದ
ವೀರಬಸವರಾಜನು
ಮೂರುಭಾಜನೆ ಬಾಹ್ಯ ತ್ರಿಗುಣವಾದುದೆ ಘನ
ನೀರೆ ನೀನೊರಸೆಂದನು ೫

ಆರುಮೂರೊಂಬತ್ತು ಸತ್ವವೆಸನಗಳ
ತೂರಿ ತುರ್ಯಾತೀತನೆ

ವೀರವಸಂತನು ನಿನ್ನ ಕೂಡೇನೆಂದು
ಸಾರಿ ಡಂಗುರ ಹೊಯ್ದಿನೆ ೬

ಇಷ್ಟು ದಿನವು ನಿನ್ನ ಕೂಡಿದನೆಂಬರು
ಭ್ರಷ್ಟ ಜೀವಿಗಳೆಲ್ಲರು
ವಿಷ್ಟ ಬಲಿದು ನಷ್ಟವು ಹಾರಿ ನಿರ್ಮಲವಾದ
ಪಟ್ಟ ಕಟ್ಟಿದೆ ನಿನಗೆ ೭

ಗಟ್ಟಿಸಿ ಮಹಘನ ನಟ್ಟು ನಿನ್ನಯ ಮನ
ಮುಟ್ಟಿ ನಾ ಕೂಡಿದೆನೆ
ಸೃಷ್ಟಿಯೊಳುವ ಗುರು ಕರಿಬಸವಾರ್ಯನ
ಪಟ್ಟದರಸಿಯು ಕೇಳು ೮

೭೭

ರಾಗ ॥ ವಡಧನ್ನಾಸಿ

ಕೊಂಡಾಡಲಳವೆ ಪ್ರಚಂಡೆಯು
ನಾಡ ಹಿಂಡು ಸ್ತ್ರೀಯರಿಗೆಲ್ಲ ಗಂಡೆಯು ॥ ಪಲ್ಲ ॥

ಮುಂದ್ದು ಮಕ್ಕಳು ಮಲನ ಕಲಸಿ
ಬಾಯೊಳಿರಿಸಿಕೊಂಬಲ್ಲಿ ಸೂಳೆಯಾಗಿರ್ದ
ಆ ಸೊಕ್ಕಮುರಿದು ಮಹದರುಯೆಂಬ
ಸೂರ್ಯನು ಪಂ[ಕಜಮುಖಿ] ಮಂದಗಜಗಮನೆಗೆ ೧

ಹೆಣ್ಣು ಬೇಕೆಂದು ತನ್ನಿಚ್ಛೆ ಬಂದಾಗಿಹ
ಕನ್ನೆವೆಣ್ಣಾಗಿ ತಾ ತಿರುಗುವದೆ
ಬಣ್ಣಿಸುವರಳವಲ್ಲ ಭವರಹಿತನ ರಾಣಿ
ಎನ್ನ ಸತಿಯು ಪತಿವ್ರತವನು ೨

ಸತ್ಯ ಹರಿಶ್ಚಂದ್ರರಾಯನ ಪತಿ ಭಕ್ತಿಭಾವೆ
ಚಂದ್ರಮತಿಯೆಂದು ಅದ
ವಿಸ್ತರಿಸುವರೆಲ್ಲ ಕೇಳಿರೆನ್ನಯ ಸತಿ
ವಿತ್ಪಾತರವ ತಾನುಸುರುವೆ ೩

ಸತಿಯಶಾಗಿರ್ದವಳಲ್ಲ ಪತಿಯಶಾಗಿರ್ದವನಲ್ಲ
ಶ್ರುತದ ಸುಗ್ಗಿಯೊಳಿರ್ದ ಸೊಗನಲ್ಲ

ಸುಖದೊಳಗಿರ್ದು ದುಃಖಕೆ ಸೋಲ್ವುದು
ಮನಹಿತದ ಹಾದರದಾವರ್ತವಲ್ಲ ೪

ಅಷ್ಟಮಹದೈಶ್ವರ್ಯದೊಳಗೆ ಇರ್ದು
ಕಟ್ಟ ಕಡೆಯಲಿ ಬಂದಿತು ಮಾಲೆ
ಪಟ್ಟದರಸಿಯಾಗಿ ದುಃಖಕೆ
ಒಳಗಾಗಿಪ್ಪುದು ಅರಿವೆನದರಿದಲ ೫

ಬಟ್ಟಕುಚದ ಬಡನಡುವಿನ ಭವಹಾನಿ
ಇಷ್ಟಲಿಂಗದೊಳೊಡಗೂಡಿದ
ಸೃಷ್ಟಿಯನಾಳುವ ಸಿದ್ಧಬಸವನರ್ಧಾಂಗಿಯು
ಪಟ್ಟದರಸಿ ಸಿದ್ಧನಂಜಿಯು ೬

ಸತ್ಚಿತ್ತಾನಂದವಾದ ಸಮಾಧಿಯೊಳಿಪ್ಪ
ಅಗಮ್ಯವನೇನೆಂಬೆ
ಆಸಕ್ತಿಯರಿದು ನಿಜ ನಿತ್ಯ ಸಮಾಧಿಯೊಳಿಪ್ಪ
ನೀಲಾಂಬಿಕೆ ರಮಣಿಯು ೭

ಸತಿಯು ಎನ್ನಯ ಗಣಪತಿ ಸಪ್ತಮಾತೃಕೆ
ಗತಿಶಯವಾದ ಶಿಖಾಮಣಿ
ಶತ ನೂರೊಂದು ಸಾವಿರ ಸತಿಯರಿಗೆಲ್ಲ
ಪತಿಯೆಂದು ಪಟ್ಟ ಕಟ್ಟಿದೆ ನಾನು ೮

ಆತ್ಮಲಿಂಗ ಅಂಗವಾಗಿ ನಾ ಬಂದಿಂದು
ಆ ಕರಿಯೆಂದೆಂಬ ನಂಜಿಗೆ
ಆತ್ಮಲಿಂಗವ ಧರಿಸಿದೆನು ದೀಕ್ಷೆಯನಿತ್ತು
ಆತಂಗೆ ನಿಜ ಶಕ್ತಿಯಾದಳು ೯

ಏಕೋದೇವ ಏಕಛತ್ರ ವಸಂತನು
ಏಕಸ್ತ್ರೀಯಾಳುವ ಕ್ರಮವಿದು
ಈ ಕಲಿಯುಗದ ಕುಂಭಿನಿಯ ಕುಂಬಳದ್ಹಣ್ಣು
ತಾನೆ ಕೊಳೆತು ಬಿದ್ದಿದೇನೆಂಬೆ ೧೦

೭೮

ಪ್ರಥಮ ಪಾರ್ವತಿಯನು ಹಳಿದು
ಅಪ್ರತಿಮ ಪಾರ್ವತಿಯಾದೆ ಆನಂದ ರೂಪಿ ॥ ಪಲ್ಲ ॥

ಕನ್ನೆವೆಣ್ಣಿನ ಮನರನ್ನ ಸಂಪನ್ನ
ಸಗುಣವೆಂಬ ನೀರ ಚಪ್ಪಳಿಸಿ
ಹೆಣ್ಣಿನ ಮನವನೊಬ್ಬುಳಿಯ ಮಾಡಿ
ರನ್ನ ಕೊಡಿದರತಿ ನಂಜಿ ಸುಗಂಧಿ ೧

ರಾಯರಾವುತ ರಾಮರಾಯಖಾನರಾಯ
ಕಾಮಾಕ್ಷಿಯ ಕಾಯಿದು ಕೊಡಿದನು
ದೇವನೊಬ್ಬನೆಯೆಂಬ ಬಿರಿದ
ಮಹದೇವ ಕಟ್ಟಿದ ದೇವ ನಂಜಿ ಸುಗಂಧಿ ೨

ಅಪ್ರತಿಮಾನಂದಲಿಂಗ ಸವಿ ಪುಟ್ಟಿಸಿ
ತನ್ನನಲ್ಲದೆ ಒಲ್ಲೆನೆಂಬ
ಕಟ್ಟಿದ ಶಾಪ ವಲ್ಲಭಗೆ
ಘನಗಟ್ಟಿ ಗಂಭೀರೆ ನಂಜಿ ಸುಗಂಧಿ ೩

ರಣಮಯ ಹೆಣಮಯ ವೇಷ
ಇದ ನಿನಗೆ ತೋರಬಂದೆ
ನಿಮಿಷ ಮಾತ್ರದಲಿ ಧನಪತಿ ಬಸವನ ರಾಣಿ
ಸವಿಸರ ಸಗುಣಲಾಪೆ ನಂಜಿ ಸುಗಂಧಿ ೪

ಸಾರಂಗಧರನರಸಿಯೆ ಸವಿ
ಸಾರದೋರುವ ಶಕ್ತಿ ಸರಸಿಜಗಂಧಿ
ಕಾರಣಿಕದ ಕಾಳಿ ನೀನೆ ಕರಿ
ಬಸವ ವೀರನಂಜಿ ಸುಗಂಧಿ ೫

ಮಸಿಯ ತಿಲಕವಿಟ್ಟು ಮಾಯಾಮಾಯ
ದೆಸೆಗೆಡಿಸಿದೆ ದೇವರಾಯಕುಮಾರ
ಅಸಮಾಕ್ಷನ ರಾಣಿ ನೀನೆ
ಸಾಹಸವುಳ್ಳವಳು ಶಾಂತ ನಂಜಿ ಸುಗಂಧಿ ೬

ನೆನ ಶಕ್ತಿಯು ಪಾರ್ವತಿಯು ಅಜ್ಞಾನ ಶಕ್ತಿ
ಕ್ರಿಯಾಶಕ್ತಿಯೆಂಬವಳು
ನೆನ ಅಜ್ಞಾನವನೊರಸಿ ಮಹಾಜ್ಞಾನ
ಶಕ್ತಿಯಾದೆ ನಂಜಿ ಸುಗಂಧಿ ೭

ಶಿವನ ಸದಾಶಿವನೊದೆದು ಬಲು ಭುವನಕಧಿಕವಾದ
ಪರಮ ಪ್ರಭುವನು ಹಳಿದು

ಪ್ರಭುವ ಗಿಭುವೆನಲು ರಾಯನೊಲಿದು
ಏಕವಾದ ನಂಜಿ ಸುಗಂಧಿ ೮

ಬ್ರಹ್ಮನ ಮುಂದಲೆಗಟ್ಟಿ ಒಲುಹೆಮ್ಮೆಯು
ನಾರಾಯಣನ ಮೂಗು ಕೊಯಿಂದು
ಹಮ್ಮಿನ ರುದ್ರನೆಂಬುವನ ಕೆತ್ತಿ ಬೆನ್ನ
ಚರ್ಮವನೆತ್ತಿ ನಂಜಿ ಸುಗಂಧಿ ೯

## ೭೯

. . . .

ವಿಷ್ಟಪತ್ರಿತು ಲಿಂಗದೊಳಗೆಯುಯಿದ
ಮುಟ್ಟಿ ಮನಗಟ್ಟಿ ಸಿದ್ಧನಂಜಿ ಸುಗಂಧಿ
ವಿಷ್ಟಪ ತ್ರಿಗುಣಗಳ ಧರಿಸಿ ನಿಂದೆಯೊ ೧

ಸೋಮವಾರ ಮಂಗಳವಾರ ಮನದೊಳಗೆ
ವಿವಾಹ ಮಾಂಗಲ್ಯವಾಯಿತ್ತು ಸಂಗಯ್ಯ ಕೂಡಿ
ಭಂಗ ಭಂಗಿಸಿದೆ ಬುಧವಾರ ಮಹ
ಲಿಂಗದೊಳಗೇಕಾಂಗಿಯಾದೆ ಬೆ . . . ೨

ಉಪವಾಸದುಪಶಾಸ್ತ್ರಿಯಿಂದಯೆನ್ನ ಮುಖ
ಕಂದಿ ಸಚರಾಚರವು ಬೆಂದಿತಿಂದು
ವಿಪರೀತ ಶರಭ ಕರಿಯಬಸವ ನಿನಗೆ
ಅಪರಿಮಿತ ಕರವೆತ್ತಿ ಮುಗಿದು ಕಳುಹಿದೆನು ೩

## ೮೦

ರಾಗ ॥ ವಡಧನ್ಯಾಸಿ

ಬಣ್ಣಿಸಲಳವಲ್ಲ ಬಸವರಾಜ
ನ್ಹೆಣ್ಣಿನ ಸಾಹಸ ಗುಣವನು ॥ ಪಲ್ಲ ॥

ಗಂಗಾಧರಗೆ ಮೆಚ್ಚಿ ಬಂದ ಹೊನ್ನಾಂಬಿಕೆ
ಎಂಬುದುಂಟುಂಟು ಮೂಜಗದೊಳು
ಲಿಂಗವೆಂದೆಂಬ ಕಂಕಣವ ಧರಿಸಿ.
ಕರಿನಂಜಿಯೆಂದೆಂಬ ನಾಮವನಾಂತು ೧

ಅಷ್ಟದಿಕ್ಕು ನವಖಂಡ ಜಂಬೂದ್ವೀಪಕ್ಕೆ
ಇಷ್ಟಲಿಂಗವನರಿದವಳಿವಳು
ಭ್ರಷ್ಟಜೀವಿಗಳಿಗೆ ನಷ್ಟವೆ ಘಟಿಸಿತು
ನಷ್ಟದೊಳಾದಾಯುವರಿದಳು ೨

ಚಂದ ಚಂದದ ಮಹಚಂದ್ರಗಾವಿಯನುಟ್ಟು
ಚಂದ್ರಶೇಖರಲಿಂಗ ಚಂದ್ರಮತಿ
ಒಂದಾದುದೆ ಶುದ್ಧ ಮಂಗಳವಾರವು
ಮಾಂಗಲ್ಯವಾದುದನೇನೆಂಬೆ ೩

ಅಂಗದೊಳಗೆ ಲಿಂಗಸುಖಿಯಾಗಿ ಮಹ
ಲಿಂಗದೊಳಗೆ ಅಂಗಸೋಯವಾಗಿ
ಅಂಗಲಿಂಗವು ಸಮರಸ ಸಮರತಿಯಿಂದ
ಲಿಂಗಕೂಡಿದ ಸುಂದರಾಂಗಿಯೆ ೪

ಬೆಚ್ಚಿತ್ತು ಲಿಂಗದೊಳಗೆ ಮನಘನ
ಹುಚ್ಚಾಯಿತು ಗಜಗಮನೆಯೊಳು
ಮುಚ್ಚಿದ ಹುಚ್ಚ ಜಡರುಗಳು ಕಯ್ಯ
ಬಿಟ್ಟಿತು ಸಂಗಯ್ಯನೊಡಗೂಡಿ ೫

ತ್ರಿಗುಣವಡದು ತ್ರಿಜಗದಾಂಬಿಕೆ ತಾನೆ
ತ್ರಿಗುಣವ ತನ್ನೊಳು ತಾನರಿದು
ತ್ರಿಗುಣದಹಿಸಿ ತ್ರಿಪುರಹರಾಂತಕಿಯೆಂದು
ತ್ರಿಗುಣ ಒಮ್ಮನವಾದ ಸಂಗನೊಳು ೬

ಲಿಂಗಶಕ್ತಿಯು ಲಿಂಗ ಬಸವನಿಗೆ
ಲಿಂಗಾಂಗಶಕ್ತಿಯು ಹೊನ್ನಾಂಬಿಕೆಗೆ
ಆದುವಾಯಿತು ಕೂಡಲ ಚೆನ್ನಸಂಗಯ್ಯ
ಲಿಂಗ ನಿಜದ ಏಕಾಂಗಿಯು ೭

ಭೇರಿ ತಂಬಟೆ ಕಹಳೆ ಭೋರಿಡುವ ಶಂಖು
ಬುರುಗು ತುಮುಕು ಡಮಾಮಿಗಳು
ಈ ರಣವನು ಕೂಡಿ ಶರಣನ ಸಮರಂಗಕ್ಕೆ
ನಡೆದ ಉಪ್ಪರಿಗೆಯನು ೮

ಜಯು ಜಯು ಜಯುವೆಂದು ಜಯು ಚಾಂಗುಭಲರೆಂದು
ಜಯು ಜಗನ್ಮಾತೆ ಭವಾನಿಯೆಂದು

ಜಯ ಸಿದ್ಧಬಸವನ ಪ್ರಾಣನಾಯಕಿಯೆಂದು
ಜಯ ಸಿದ್ಧನಂಜಿಯೆ ಜಯವೆಂದು ೯

೮೧

ರಾಗ ॥ ಘಂಟಾರಾಗ

ಗಜಗಮನವಾಯಿತ್ತು ಭುವನಕತಿ ಪೊಸತಾದ
ವೇದಕರಿಯು ನಂಜಿ ಮಹ ತ್ರಿಜಗಕತಿ ಪೊಸತು
ಭಜನೆಗಳನೊದದು ಭಕ್ತಿ ಜ್ಞಾನ ವೈರಾಗ್ಯ
ಉದಯವಾಯಿತು ಬಿದಿಗೆಚಂದ್ರನಂದದಲಿ ೧

ನಿನ್ನಿಂದ ದಯವೆನಗೆ ನಿನ್ನಿಂದ ದಾಕ್ಷಿಣ್ಯ
ನಿನ್ನಿಂದ ನರಕದೊಳಗಿಹೆನು ನಾ ನಂಜಿ
ನಿನ್ನ ನೀ ತಿಳಿದು ಪತಿವ್ರತದಲ್ಲಿ ನಿಲಲಾಗ
ಎನ್ನ ಭವ ಹರಿಯಿತ್ತು ಎನ್ನಂತರಾಮಿ ೨

ನಾನು ತಬ್ಬಲಿಯಾದೆ ನನಗಾರು ಇಲ್ಲವೈ
ನಾನೆಂಬ ಒಲವು ನಿನಗಾಯಿತೆಲೆ ನಂಜಿ
ನಾನು ನೀನಾದೆನೈ ನೀನು ನನ್ನವರಿಗೆ
ನಿಧಾನ ಉಪದೇಶ ಮಹದೇವ ಗುರುನಂಜಿ ೩

ಅಷ್ಟಾವಧಾನ ಮಹಿಪುರದೊಳಿಹ ನಂಜಾಜಿ
ಗಷ್ಟದಿಕ್ಕಿನ ಜಡನಾರಿಯರು ಸರಿಯೆ
ಸೃಷ್ಟಿಗಪ್ರತಿಮಗಾರುಂಡಿಗ ಬಸವನರಾಣಿ
ಪಟ್ಟದರಸಿಯೆ ಸಿದ್ಧನಂಜಿ ಶಿವಲಿಂಗಿ ೪

ನರರ ಸಂಹರಿಸಲ್ಕೆ ನರನಾದ ಪರಮಾತ್ಮ
ನರರೆನ್ನಬಹುದೆ ನರಕಿಗಳು ಪರಶಿವನ
ಧರೆಯ ಭಾರವನಿಳುಹಬೇಕೆಂದು ಕರಿರಾಯ
ಧರೆಗಿಳಿದ ನೋಡೀಗಳು ಪರಮಾತ್ಮನೆಂದು ೫

ಸಾರವನು ತೆಗೆದು ನಿಸ್ಸಾರವನು ಮಾಡಿದ
ವಿರೋಧಿ ಕರಿಬಸವಗೆ ಆರು ಇದಿರಿಲ್ಲ
ನಾರಿಯನು ಮರ್ದಿಸಿ ವಿಕಾರವನು ಮರೆದು
ವಿರೋಧಿ ಕರಿಬಸವ ಮಹಧೀರ ಕರಿವೀರ ೬

ಇಲ್ಲಿಂದ ಇತ್ತ ತೋರುವದೊಂದು ಅಚ್ಚರಿಯ
ಉಲ್ಲಾಸದೊಸಗೆಯನು ಉಸುರಲಳವಲ್ಲ

ಕಲ್ಯಾಣವಾಯಿತು ಕಂಬವನು ನಟ್ಟಲ್ಲಿ
ಅಲ್ಲಮನು ಒಂದನೆನಿಸುತದು ಶ್ರೀಮುಖದಿ ೭

ಶ್ರೀಮುಖದ ಚೈತ್ರ ವೈಶಾಖ ಮಾಸದ ದಿವಸ
ಆಯುಧವ ಪಿಡಿದ ಕರಿಯಾತ ವಸವಂತ
ಸ್ತ್ರೀಯರಿಗೆ ರತ್ನಕಣಿ ಮುತ್ತಿನ ಮಣಿಯೆ
ಕೇಳೆನ್ನ ಬಿನ್ನಪವ ಹೇಳುವೆನು ರಮಣಿ ೮

ನಾನು ನಿನ್ನಾತ್ಮ ವಸವಂತನೆಂಬುದ ನಂಜಿ
ನೀ ತಿಳಿದು ನೋಡು ನಿನ್ನಂತರಂಗದಲಿ
ನೀನು ಜಗದಂಬಿಕೆಯು ಪಾಪದ ನಿಮಿತ್ಯ
ಎನ್ನಾಣೆ ಪುಟ್ಟಿದೆ ಕೆಳದಿ ಭವಹಾನಿ ೯

ಭವಹರಿಯು ಭವಹಾನಿ ಭವದೂರೆ ಕರಿನಂಜಿ
ಭ್ರಮರಾಂಬಿಕೆಯೆ ಕೇಳು ಭಕ್ತಿ ಬಸವಾಜಿ
ಭವದ ಭರವ ನೂಕಿತ್ತು ಸುಟ್ಟಿ ಭಸ್ಮವುಟ್ಟು
ಭಯಂಕಾರನೆಂದು ನೀನು ಭಾವ ಸಂಜೀವಿ ೧೦

ಇಂತಿ ಭವಸಾಗರವ ದಾಂಟಿಪ ರಂಗಿ
ನಿನ್ನಂತರಂಗವೆಂಬ ಹಡಗಿನೊಳು ನಿಂದು
ಚಿಂತಾಯಕನು ನಿನ್ನಾತ್ಮ ವಸವಂತ
ನಿನ್ನಂತರಂಗದಲಿ ನಿಶ್ಚಿಂತನಾಗಿಹನು ೧೧

ಹುಸಿಯು ಬಾರದು ನೋಡು ಧರೆಯು ಹೊಯಿದ ಕರವು
ಹುಸಿಯು ಬಾರದು ಗಿರಿಯುನೆಚ್ಚುಂಬು ನಂಜಿ
ಹುಸಿಯು ಬಾರದು ನಾನು ನೀನತ್ತಿಕೊಂಡಿಹುದು
ಹುಸಿಯು ಬಾರದು ಕರಿಯುಬಸವನೆಂಬುವನು ೧೨

ಇಂದು ಶಿವಯೋಗದಲಿ ನಿಂದ ನಿಜ ಪರಮಾತ್ಮ
ನಂಜಿಯೆಂದೆಂಬುಂಗವಸ್ತ್ರವನು ಧರಿಸಿ
ಮುಂದೆ ತೋರುವದು ಸೂಚನೆಯು ಪರಮಾನಂದ
ನಂಜುಗೊರಳಭವ ಕರಿನಂಜಿಯೊಳು ನಿಂದು ೧೩

೬೨

ಕೊಂಡಾಡಲಳವಲ್ಲ ನಿನ್ನ ಉಘೆಯೆಂದು ॥ ಪಲ್ಲ ॥
ಜಯ ಚಾಂಗುಭಲರೆಂದಿತಲ್ಲ

ಬಡಗಣ ದೇಶದ ಶೆಟ್ಟಿ ನಿನಗೊಡಲಿಲ್ಲದ
ಒಡವೆಯು ಕೊಂಡು ಬಂದ
ತೊಡುವರೆ ಕರಕೆ ಕೊಂಡು ಬಂದ
ತೊಟ್ಟು ನಡೆದಾಡುವ ಬೆಡಗಿನ ನಾರಿಯೆಂದ ೧

ತುರುಕಾಣ್ಯದ ಸೆಟ್ಟಿ ನಿನಗೆ ಎಂಹ
ಪರಿಪರಿ ಸೀರೆಯು ವಿರಚಿಸಿ ತಂದ
ಉಡುವರೆ ಕರೆಕೊಂಡು ಬಂದ
ಉಟ್ಟು ನಡೆದಾಡುವ ಬೆಡಗಿನ ನಾರಿಯೆಂದ ೨

ಉತ್ತರದೇಶದ ಶೆಟ್ಟಿ ಮಹರತ್ನ
ತೆತ್ತಿದ ಒಡವೆಯು ಕೊಂಡು ಒಂದ
ತೊಟ್ಟು ಕೊಂಬರೆ ಕರೆತಂದು
ತೊಟ್ಟು ಮೆಟ್ಟಿ ಪೇರಣಿಯು ತಟ್ಟಾಡುವನೆಂದ ೩

ಬಸವಣ್ಣ ಶೆಟ್ಟಿಯೆಂಬವನು ಅವ
ದೆಸೆಯೆಂಟುದಿಕ್ಕಿಗೆ ಹೊಸಪರಿಯುವನು
ಹಂಸಿಯು ಮರ್ದಿಸಿ ಹೊಸೆದಿಹನು ನೋಡೆ
ಅಸಮಾಕ್ಷನು ನಂಜಿ ನಿನ್ನ ಪುರುಷನು ೪

ದಡದ ನಾಡೆಯು ಬಸವುಗನು ಮಹಾಯ
ಸುಡುವ ಗಾಲಿಯು ಮಾಡಿ ರಥವ
ಹೂಡಿದನು ನಡೆಸಿಕೊಂಡು . . . ಡವ ತಾ ತನ್ನ
ದಡದಡನೆ ಬರುವ ದೊಡ್ಡರಥದ ಮೇಲಿಹನು ೫

ಬಟ್ಟುನಟ್ಟುವ ಬಸವುಗನನು ತನ್ನ
ಮುಂಟ್ಟಿಕೊಂಡಾಡುವ ಗಟಿ . . . ಯುಳ್ಳವನು
. . . ಗಪ್ರತಿಮರ ಮಗನು ಮನ
ಮುಂಟ್ಟಿ ಅಷ್ಟದಿಕ್ಕಿನೊಳಗೆ ನಿನ್ನ ಎತ್ತಿ ತೋರಿದನು ೬

ಬೋಳುಮನದ ಬಸವುಗನು ನಿನಗಾಳಾಗಿ
ಊಳಿಗವನು ಮಾಡುತಿಹನು
ಹೇಳುವರೆಳವಲ್ಲದವನು ನೀನು
ಹೇಳಿದಂತಿರುತಿಹ ಹೆಸರಿಲ್ಲದವನು ೭

ನಿನಗಾರನೊಲಿದು ಸಿಕ್ಕಿದನು ನೀನು
ಅವನಿಗೊಲಿವುದಿಷ್ಟು ದಿನವಾದುದೇನು

ಘನವಾದ ಈಡ ಹಾಕಿದನು ನಿನ್ನ
ಮನಸಿಜ ಗುರು ಕರಿಬಸವ ಚೆನ್ನಿಗನು ೮

೮೩

ರಾಗ ॥ ತೆಲುಗ ಕಾಂಬೋದಿ

ಚೆಂದವಾಯಿತು ಚಂದ್ರಮತಿಯೆ
ಲಲ್ಲೆಯಿಂದೆನ್ನ ಮನಸೋತು ಬಂದು ನಿನ್ನೆಡೆಗೆ ॥ ಪಲ್ಲ ॥

ಒಲಿದ ಚೌಕಲೆ ಮಧ್ಯದೊಳಗೆ
ರತ್ನ ಕಳೆದು ಬಿದ್ದುದ ಕಾಣದಾದೆ
ಕಾಣಬಲ್ಲೆ ನೆಲಕೆ ಬಿದ್ದುದನೆತ್ತಿ ಕೊಡಲು
ಕಲೆನೆಲೆಯು ಕಪ್ಪಿನಿಪತಿ ಚೆಲುವ ಚೆನ್ನಿಗನು ೧

ಒಂದು ದಿನದ ಕನಸಿನಲ್ಲಿ ನೀನು
ಅಂಧಕಾರದೊಳ್ನಿಂದು ಕಣ್ಗಾಣದಿರಲು
ಬಂದು ನಾ ನಿಂದು ಪೆಗಲೊಳುಯೆತ್ತಿಕೊಂಡು
ದಾಂಟಿಸಿದುದ ಅರಿಯ ಕಾಣಬಲೆ ೨

ಮತ್ತೊಂದು ದಿನದ ಸಂಜೆಯಲ್ಲಿ ಹಾದಿ ತಪ್ಪಿ
ನಡೆಯಲಾಗ ಚಿತ್ತ ಭೂತಗಳು
ಎತ್ತಿ ಮುಖವ ನೋಡಲಾಗ ಹಾದಿ ತಪ್ಪಿ
ಬಂದೆನು ತಾ ಪಲ್ಗಿರಿದುದನರಿಯ

ನಿನ್ನ ಮೂಕುತಿಯು ಮೌಕ್ತಿಕವು ನೋಡೆ
ತನ್ನ ತಾ ಹೊರೆಯಾಗಿ ಹೋದುದ ಕಂಡು
ನಿನ್ನ ಮನವು ಖತಿಗೊಂಡು ನಿಜ ನಿರ್ಮಲ
ಮೂಕುತಿ ಹೋಯಿತೆಂದರಿಯ ೪

ನಿಮ್ಮ ನಿಜದ ನಾರಿಯೊಳಗೆ ಅಮ್ಮ
ಉನ್ನಂತ ಮೂಕುತಿ ಚೆನ್ನ ಬ
. . . ನಿನ್ನ ಮನೆಯ ದಾಸಿಯೆನಲು ನೋಡೆ
ಮುನ್ನಿಗಿಂ ಮಿಗಿಲಾದ ಮೂಕುತಿಯ ಕಂಡೆ ೫

ಚಂದ್ರಶೇಖರ ಚಂದ್ರಮತಿಯು
ಘನಲಿಂಗದೊಳಗೆ ಕೂಡಿ ಒಂದಾಗಿ ನಡೆದು
ಮಂಗಳವಾರದದಿನವು ೬
ಮಹ ಮಾಂಗಲ್ಯವಾಯಿತ್ತು ಚಂದ್ರಶೇಖರಗೆ

ಉಚ್ಛಾಹ ಶರಣರಿಗಿಂದು ಬಲು
ಅಚ್ಚರಿಯಹಾಯಿತು ಶುಕ್ಲಪಕ್ಷದಲಿ
ಎತ್ತಿ ಧನುವಪಿಡಿಕೊಂಡು ತೆಗೆದೆಚ್ಚನು
ರಾಯಕುವರಾರ ವಸವಂತ ೭

೮೪

ರಾಗ ॥ ತೆಲುಗ ಕಾಂಬೋದಿ

ಬಟ್ಟಕಂಚದ ಭಾವೆ ನಿನ್ನಿಂದ
ಅಷ್ಟದಿಕ್ಕಾಳ್ವುದು ನಾನು ನಿನ್ನಿಂದ
ಸೃಷ್ಟಿಗೊಡೆಯನಾದೆ ನಿನ್ನಿಂದ
ರಾಯಪಟ್ಟ ಕಟ್ಟಿತು ಕಾಣೆ ನಿನ್ನಿಂದ ೧

ಆತ್ಮಲಿಂಗವು ನಾನು ನಿನ್ನಿಂದ
ಒಂದು ನಾ ತನುವಿಡಿದುದೆ ನಿನ್ನಿಂದ
ಆತ್ಮತಪವ ಮಾಡಿ ನಿನ್ನಿಂದ
ನಿಜಾತ್ಮನಾದೆನು ನೋಡೆ ನಿನ್ನಿಂದ ೨

ಅಂಗ ಪ್ರಾಣಗಳಿಗೆ ನಿನ್ನಿಂದ
ನಿಜಲಿಂಗ ಘಟಿಸಿದುದೆ ನಿನ್ನಿಂದ
ಭಂಗಿಸಿ ಭಜನೆಯು ನಿನ್ನಿಂದ
ಉಲ್ಲಂಘಿಸಿ ಒದೆದುದೆ ನಿನ್ನಿಂದ ೩

ಸತ್ವಸ್ತ್ರೀಯರುಗಳ ನಿನ್ನಿಂದ
ಸವಿಯಿತ್ತು ನಾ ಸವಿದುದೆ ನಿನ್ನಿಂದ
ಚಿತ್ರದಂಗನೆ ಕೇಳು ನಿನ್ನಿಂದ
ಪಾಲಿಪಂತೆ ನೀನಿಹ ನಿನ್ನಿಂದ ೪

ಸಿದ್ಧಿಯಾಯಿತು ಕಾಣೆ ನಿನ್ನಿಂದ
ನಾನು ಸಿದ್ಧಬಸವನಾದೆ ನಿನ್ನಿಂದ
ಸಿದ್ಧನಂಜಿಯು ಕೇಳು ನಿನ್ನಿಂದ
ಬಲು ಭದ್ರವಾಯಿತು ಲೀಲೆ ನಿನ್ನಿಂದ ೫

೮೫

ರಾಗ ॥ ತೆಲುಗ ಕಾಂಬೋದಿ

ಆತ್ಮಸತಿಯು ನೀ ಮರದು
ಮಲರತಿಯು ಬಯಸಿದ ಹಾಗೆ
ಗತ ಸಾರಿತ್ತೈ ನಿನಗೆ ಆತ್ಮ
ಆತ್ಮಖತಿಗೊಂಡು ನಿನ್ನ ಮನ
ದಂತಿಸೂಕರನಾಗಿ ಹಿತಕೆ ನಿಲದಿದೇಕೆ ಪರಮಾತ್ಮ ೧

ಆತ್ಮಕಣ್ಣೊಳಗೆಸದಯಿರ ಬ . . .
. . . ವಾಡುವದು ನಿರ್ಮಲವೆ ನಿನಗೆ ಚೆಲುವಾತ್ಮ
ಆತ್ಮ ನಿನ್ನಾಣೆ ಮಲರತಿಯು ದಹಿಸಿ
ನಿರ್ಮಲನಾಗಿ ಚೆನ್ನೆಯೊಡಗೂಡೊ ಪರಮಾತ್ಮ ೨

ಆತ್ಮ ಮೊದಲುವಿಡಿದುದೇ ಕನಿಷ್ಠವು
ಶಂಕೆ ಶಂಕಿನಿಯು ನಡುವೆ ಮಧ್ಯ ಮದಹಸ್ತಿನಿಯು
ಆತ್ಮ ಕಡೆಯಲ್ಲಿ ಉತ್ತುಮದ ಚಿತ್ತಿನಿಯ
ಕೂಡುವದು ಸಡಗರವಿದೇನೊ ಪರಮಾತ್ಮ ೩

ಆತ್ಮ ಜಾತಿನಾಯಕಿ ಗಳರವದ
ಮಂತ್ರವ ಕೇಳಿ ಸೂತಕವ ಕಳೆದು ಪರಮಾತ್ಮ
ಆತ್ಮಪ್ರೀತಿಯಿಂ ನಿನ್ನವಳ ನುಡಿಯಲಾಲಿಸಿ
ನಂಜಿಯರ್ಬೂತವ ಮಾಡೆ ಪರಮಾತ್ಮ ೪

ಆತ್ಮ ಒಲ್ಲೆನೆಂದೆಂಬ ಸೂಳೆಯನೊಲಿಸಿ
ಮುಂದಲೆಯ ಉಲ್ಲಾಸದಿಂ ಪಿಡಿದು ಕುಣಿಸಿ
ಆತ್ಮ ಕೊಲ್ಲದಿರ್ದಡೆ ಆವಳ ಮಿಂಡಗಾರರ
ಮಲದೊಳಲಿಹೆ ನೀ ನೋಡು ಪರಮಾತ್ಮ ೫

ಆತ್ಮಯಿದೆ ಮೊದಲು ಬ್ರಹ್ಮಾಂಡ ಸೂಳೆಯರಿಗಾನಂದ
ಹರಣಗಾರಿಕೆಯ ಕರುಹಿದೆಂದು
ಆತ್ಮ ಸದೆಬಡಿದು ಸೂಕರಿಗೆ ಮದಕರಿಯ
ಅರುಹಿತ್ತ ಹದಗಾರನೆನಿಸೊ ಪರಮಾತ್ಮ ೬

ಆತ್ಮ ನರಕವನು ಬಯಸಿ ಸೂಕರನಾಗಿ
ಮೊರವುತಿಹ ಪರಿಕರವಿದೇನೊ ಪರಮಾತ್ಮ
ಆತ್ಮ ನರಕವನು ನಾಲ್ಕೊರುಷ ತಿಂದು ೭
ದಣಿಯದ ಪರಿಯ ವಿರಚಿಸುವದೆನಗೆ ಪರಮಾತ್ಮ

ಆತ್ಮ ಹತ್ತುಸಾವಿರ ನಾರಿಯರ ಮೇಲೆ ಕಣ್ಣಿಟ್ಟು
ಚಿತ್ತ ಸೂಕರಿಯ ಮೇಲಿಹುದು
ಆತ್ಮ ವಿಸ್ತರಿಸಿ ಪೇಳಯ್ಯ ಅಂಗಲಿಂಗಿಯ ಕೂಡೆ
ಭಸ್ಮಾಂಗಲಿಂಗ ಪರಮಾತ್ಮ ೮

ಆತ್ಮ ಕರಿಯು ನೀನಾಗಿರ್ದು ನರಿಯೊಡನೆ ಕೂಡುವದು
ಸರಿಯಲ್ಲ ನಿನಗೆ ಪರಮಾತ್ಮ
ಆತ್ಮ ಕರಿಯು ನರಿಯೊಡನೆ ಕೂಡವದೊಂದು ಅಚ್ಚರಿಯ
ವಿಸ್ತರಿಸಿ ಕೇಳುವದು ಪರಮಾತ್ಮ ೯

ಆತ್ಮ ವಿಪರೀತ ಮಹಿಮನೆ ಅಪರಿಮಿತ ವಸ್ತುವೆ
ಕಪಿಯಂತೆ ಆಡುತಿಹೆ ಆತ್ಮ
ಆತ್ಮ ಕಪಟನಾಟಕ ಸೂತ್ರಧಾರಿ ಶರಣಾಗತನೆ
ನುತಿಸಲೆನ್ನಳವೆ ಪರಮಾತ್ಮ ೧೦

ಆತ್ಮ ಎನ್ನಮೇಲೊರ್ವ ಸೂಳೆಯನು ಮೋನೆಮಾಡುವುದು
ಧರ್ಮವೆ ನಿನಗೆ ಚೆಲುವಾತ್ಮ
ಆತ್ಮ ನಿನ್ನ ಸಮರತಿಗಲಿಸಿ ನಿಜಶಕ್ತಿಯೆನಿಸಿದರೆ
ನಿನ್ನಂತೆ ಕಾವೆ ಪರಮಾತ್ಮ ೧೧

ಆತ್ಮ ದಿನಚರಿಯ ಚೌತಿ ಏಳನೆಯ ದಿನದೊಳಗಿಂದು
ದಿನನಾಯಕಂದಿಸವಳ ಮನದಿ
ಆತ್ಮ ದಿನಚರ್ಯ ಮಾರ್ಗಮೆಂಗನುಮನವ ತೀರಿಸೈ
ಮಹಿಮಾಪರ್ಣದ ಮಹಿಪರಾತ್ಮ ೧೨

ಆತ್ಮ ಪರಮಾತ್ಮನೆಂದೆಂಬ ಪುರುಷವೇಷವ ಧರಿಸಿ
ನರನಂತೆ ಬಳಲುವರೆ ಆತ್ಮ
ಆತ್ಮ ಪರನಾರಿಯೆಂದೆಂಬ ಕರಿನಂಜಿಯೊಡಗೂಡಿ
ಸುರತದೊಳಿರು ಕಂಡ ಮದಕರಿ ಪರಮಾತ್ಮ ೧೩

ಆತ್ಮ ನಾನು ಅವಳೆಂದೆಂಬುವೆರಡು ಚಮ್ಮಾವುಗೆಯ
ನೀನು ಮೆಟ್ಟಿರ್ದಕಾರಣವು
ಆತ್ಮ ನಾನೆ ಅವಳು ಅವಳೆ ನೀನಾದ ಮೇಲೆ ನಾ
ಕರವೆತ್ತಿದೆನೊ ಪರಮಾತ್ಮ ೧೪

೮೩

ರಾಗ ॥ ಶಂಕರಾಭರಣ

ಅಗಲದಯೋಗವ ಮಾಡಿ
ಮೃಗನೇತ್ರೆಯೊಡಗೂಡಿ
ಜಗದೊಳು ಕರಿಬಸವಾರ್ಯನೊಬ್ಬನೆಯೆಂದು
ಜಗಜಗಿಸಿತು ಜಗವು ॥ ಪಲ್ಲ ॥

ಮಂಗಳವಾರದ ದಿನವು
ಮನವಾರಿಸಿ ಕೊಂಡು
ಅಂಗಗುಣವಳಿದು ಘನಗರ್ವಗಂಟಿಕ್ಕಿ
ಲಿಂಗಾಂಗವಾಯಿತೆಂದು
ಅಂಗನೆ ತಾನೆಚ್ಚತ್ತು
ಲಿಂಗಾಯುಧವ ಪಿಡಿದು
ಭಂಗಿಸಿ ಭಜನೆಯು ಒಡಿದು ಅಪ್ಪಳಿಸಂತ
ಸಂಗ್ರಾಮ ಸಾಹಸಿಯು ೧

ಬುದ್ಧಿಗಲಿಸಿದುದೆ ಬುಧವಾರ
ಸಿದ್ಧಿಯಾಯಿತು ಆತ್ಮ ಶಿವಯೋಗ
ಭದ್ರವಾಯಿತು ಭವಹಾನಿ ಹಾಹಾಯೆಂದು
ಮುದ್ದು ಮಾಡಿದ ರಾಜನು
ರುದ್ರಾಣಿ ಕರಿನಂಜಿ ಮರ್ದಿಸಿ ತನ್ನಂಗಗುಣಗಳನು
ಶುದ್ಧಯಿಸಿದ ಸಿದ್ಧನಂಜಿಗಿನ್ನೆಣೆಗಾಣೆ ಸಿದ್ಧ ಬಸವರಾಜನು ೨

ಇಷ್ಟ ಪ್ರಾಣ ಭಾವಯೇಕವಾಗಿ
ನಷ್ಟವೆಲ್ಲವನು ಸುಟ್ಟುರುಹಿದಳು
ಕಟ್ಟಿ ಕೋಲಾಹಲಮಾಡಲು ಭಜನೆಯ
ಕಷ್ಟದ ರೂಪಾದಳು ಭ್ರಷ್ಟಜೀವಿಗಳಿಗೆ
ಕೆಟ್ಟಳೆಂದೆನಿಸುವನು ಸೃಷ್ಟಿಯಾಳುವ ಸಿದ್ಧರಾಮ ವಸಂತನ
ಪಟ್ಟದರಸಿ ಸಿದ್ಧ ನಂಜಿಯು ೩

೮೭

ರಾಗ ॥ ಆಹರಿ

ಬಂದೆ ನಿನ್ನೆಡೆಗೆ ಭವಹಾನಿ ಕರುಣದಿಂದೆನ್ನ ॥ ಪಲ್ಲ ॥
ಕೃಪೆಯಿತ್ತು ಸಲಹುವ ಶರ್ವಾಣಿ

ಚಿಂತೆಯನು ಬಿಟ್ಟು ನಿಶ್ಚಿಂತೆಯಾದಳುಯೆಂದು
ಅಂತರಾತ್ಮನು ನುಡಿದ
ಕಂತುಹರನ ಸಂತಸವನೇನ ಬಣ್ಣಿಪೆನು ಪ್ರಾಣಕಾಂತೆ
ಒಡಗೂಡೆಂದು ಕರೆದು ತಂದಿಂದು ೧

ಮುಗದು ಮುಳವಳ್ಳಿಯಿಂ ತಳಕಾಡಿಗೈತಂದು
ಅಗಣಿತನು ಪರಮಗುರು ಅಂತರಾತ್ಮಕಲಿಂಗ
ಪೊಗಳಲಳವಲ್ಲ ನಿನ್ನಿರವ ನೀನು
ಕರಿಯ ಚರ್ಮವ ಪೊದ್ದ ಭರವ ನಾ ಕಂಡು ೨

ಸಪ್ತಮಾತೃಕೆಯರಿಯೆ ಶಕ್ತಿ ಸಾಹಸವ [ನಾಂತಂ]ತೆ
ಮುತ್ತೈದೆ ಕರಿನಂಜಿ ಕರಿಯ ಬಸವನು ಸಹಿತ
ನಿಶ್ಚಿಂತಲಿಂಗವನು ಧರಿಸಿ ನಿಂದ
ಅಚ್ಚರಿಯ ವಸಗೆಯನು ಕೊಂಡು ನಾ ಬಂದೆ ೩

೮೮

ರಾಗ ॥ ತೆಲುಗ ಕಾಂಬೋದಿ

ಕೋಗಿಲೆಯೆನ್ನ ಸತಿ ಕುಲತಿಲಕ
ಚೆನ್ನನಂಜಿಯ ಕೂಡೆ ಬಿನ್ನಹ ಮಾಡು ಮುದ್ದು ಕೋಗಿಲೆ
ಕೋಗಿಲೆ ಮನ್ಮಥನ ಸುಟ್ಟು ಮ
ನ್ಮಥನಾದ ಮಯನೆಂದು ಚೆನ್ನಾಗಿಹೇಳು ಕಂಡ ಕೋಗಿಲೆ ೧

ಕೋಗಿಲೆ ನಾಲ್ಕನೆಯ ಯುಗದಿಂದ
ನಾವಲ್ಲದಿಲ್ಲಪೆಂದೀ ಕಲಿಯುಗದೊಳು ತಾ ಪುಟ್ಟಿ
ಕೋಗಿಲೆ ಏಕಮೂರುತಿ ಸಿದ್ಧಬಸವ
ಚೆನ್ನಿಗನೆಂದು ಕಾಕುಮುನಿಜರನೊದೆದ ಕೋಗಿಲೆ ೨

ಕೋಗಿಲೆ ಹತವಾಗಿ ಹಾಸ್ಯಗಳು ಮೃತವಾಗಿ
ದೂಷ್ಯಗಳು ಮಂಥನಿಸುವ ಮಾಯಮಲಗಳು ಕೋಗಿಲೆ
ವ್ರತವಾಗು ಮುಕ್ತಿಯನು ವಿಚಾರಿ ತೋರುವೆನೆಂದು
ಹಿತವಾಗಿ ಹೇಳು ಕಂಡ ಕೋಗಿಲೆ ೩

ಕೋಗಿಲೆ ಗಿಳಿಯ ಕಳುಹಿಸುಯೆಂದು
ಕಳಶಕುಚ ಕೋಮಲೆಯು ನಳಿನಾಕ್ಷಿಯೆನ್ನೊಡನೆ ನುಡಿದ
ಕೋಗಿಲೆ ಇಳೆಯೊಳಗೆ ಅತಿಪೊಸತಾದ
ಧವಳವರ್ಣದ ಗಿಳಿಯ ಕಳುಹಿದೆನುಯೆಂದು ಹೇಳು ಕೋಗಿಲೆ ೪

ಕೋಗಿಲೆ ನಂಜಿಯೆಂದೆಂಬ ಪಂಜರದೊಳಗೆ
ನಾನಾತ್ಮಲಿಂಗವೆಂದೆಂಬ ಗಿಳಿ ಕೂಡಿ
ಕೋಗಿಲೆ ನಂಜಿಯೊಳು ಬಿನ್ನೈಸು
ನಂಜುಂಡಲಿಂಗನೆಂದೆಂಬ ಗಿಳಿ ಮುದ್ದು ಕೋಗಿಲೆ ೫

ಕೋಗಿಲೆ ನಾನೆ ನಾನೆಂದೆಂಬ ಗಿಳಿಯು ಮುಂಗಯ್ಯೊಳಗೆ
ನಾನೆ ಷೋಡಶ ಬಂಧದೊಳಗೆ
ಕೋಗಿಲೆ ನಾನೆ ನವರಸ ರತಿಯು ಬೀರಿ ತೋರುವ
ಗಿಳಿಯು ನಾನೆಂದು ಹೇಳು ಕಂಡ ಕೋಗಿಲೆ ೬

ಕೋಗಿಲೆ ತನ್ನ ಅಧರವನುಂಡು ತನ್ನೊಳಗೆ ಸುಖಿಯಾಗಿ
ತನ್ನೊಳಗೆ ಲಲ್ಲೆಮಾತುಗಳ
ಕೋಗಿಲೆ ತನ್ನೊಳಗೆ ನುಡಿದು ತಾ ತಾನಾಗಿ ತೋರುವದು
ಚಿನ್ನದರಗಿಳಿ ಮುದ್ದು ಕೋಗಿಲೆ ೭

ಕೋಗಿಲೆ ಮುದ್ದು ಮಾತಿನ ರಾಮ ಮುಸುಕಿನೊಳಗಿಹ ರಾಮ
ಸಿದ್ಧ ಬಸವುಗನೆಂಬ ರಾಮ
ಕೋಗಿಲೆ ಸಿದ್ಧನಂಜಿಯು ಕೂಡಿ ಸರಸಸತ್ಕಲೆ ಮಾಳ್ಪ
ಸಿದ್ಧರಾಮನೆಂದು ಹೇಳು ಕೋಗಿಲೆ ೮

ಅಪಿನಿಯೆಣ್ಣೆಯು ಕುಡಿದು ಸತಿಪತಿಯರೀರ್ವರು
ಹತವಾಗಬೇಕೆಂದು ನುಡಿದ
ಕೋಗಿಲೆ ಅಪಿನಿ ತಾನೆಂದೆಂಬ ಹೆಣ್ಣು ಕೂಡಿದವೆಂದು
ಹಿತವಾಗಿ ಹೇಳು ಕಂಡ ಕೋಗಿಲೆ ೯

ಕೋಗಿಲೆ ತನ್ನ ಕಾಲಿಗೆ ತಕ್ಕ ಹಾವುಗೆಯು ಕಳುಹೆಂದು
ನನ್ನೊಳಗೆ ನುಡಿದಂಗವಿಂಗಿ
ಕೋಗಿಲೆ ತನ್ನ ಕೂಡಿದ ಗಮನ ನಿರ್ಗಮನದಾವುಗೆಯು
ನಿನ್ನಾಣೆ ಕಳುಹಿದೆನು ಮುದ್ದು ಕೋಗಿಲೆ ೧೦

ಕೋಗಿಲೆ ಹೆಣ್ಣುಮಗುವಾಗ ಬೇಕೆಂದೆನ್ನ ರಾಣಿ ತಾ
ನನ್ನೊಳಗೆ ನುಡಿದ ಕಾರಣವು
ಕೋಗಿಲೆ ಬಣ್ಣಸುವರಳವಲ್ಲ ಬ್ರಹ್ಮವೆ ತಾ ತನ್ನೊಂದು
ಹೆಣ್ಣಾದಳೆಂದು ಹೇಳು ಕೋಗಿಲೆ ೧೧

ಕೋಗಿಲೆ ಹಸುವ ಕಳುಹಿಸುಯೆಂದು ವಸುಧೀಶನು ರಾಣಿ
ಅಸಮಾಕ್ಷಲಿಂಗದೊಳು ನುಡಿದೆ

ಕೋಗಿಲೆ ಹಸನಾಯಿತಾತ್ಮಾಂಗಲಿಂಗ ಬೆಸುಗೆಯಿಂದ
ಈ ಕುಶಲ ಹಸಿಗೆಯ ಮಾಡು ಕೋಗಿಲೆ ೧೨

ಕೋಗಿಲೆ ಅಂತರಾತ್ಮಕನು ನಿಶ್ಚಿಂತ ನಿಜದಾನಂದವಂತ
ನೀನೆಂದು ಕಳುಹಿದೆನು
ಕೋಗಿಲೆ ಸಂತಸವನಿತ್ತೆನ್ನ ಪ್ರಾಣಕಾಂತೆಯ ಕೂಡೆ
ಪಂತದೊಳಗಿರು ಕಂಡ ಕೋಗಿಲೆ ೧೩

ಕೋಗಿಲೆ ನಂಜಿಯೆಂದೆಂಬ ಕುಂಜರ ಹಾ
ಮದವೇರಿನಿಂದ ನಿಜದಾನಂದದೊಳಗೆ
ಕೋಗಿಲೆ ನಂಜಿಯನು ಮರೆಹೊಕ್ಕೆ ನಂಜುಂಡಲಿಂಗ
ನಾನೆಂದೆಂಬ ಮಾವಟಿಗ ಕೋಗಿಲೆ ೧೪

ಕೋಗಿಲೆ ತಿಂಗಳು ತುಂಬಿ ತ್ರಿಗುಣಗಳೆಲ್ಲವ ಸುಟ್ಟು
ಲಿಂಗಾಂಗಿಯಾದ ಕಾರಣವು
ಕೋಗಿಲೆ ಮಂಗಳಾತ್ಮಕ ಸಿದ್ದ ನಂಜಿಯೊಡಗೂಡಿ ನೀ
ಹಿಂಗದೆ ಇರು ಕಂಡ ಕೋಗಿಲೆ ೧೫

ಕೋಗಿಲೆ ಒಂದು ತಿಂಗಳಿಗೆ ನಾನಾ ಲಂಕೆಯು ಕಳುಹಿ ಬಂದು
ನಾನಿದ್ದು ಸಲಹಲ್ಕೆ ಕೋಗಿಲೆ
ನಂಜಿಯನ್ನು ಕೂಡಿ ಜಯ ಜಯವೆಂಬ ಜಾತ್ರೆಗೆ
ಬಂದನೆಂದು ಹೇಳು ಕಂಡ ಕೋಗಿಲೆ ೧೬

ಕೋಗಿಲೆ ಇನ್ನು ನವಖಂಡ ಜಂಬೂದ್ವೀಪದೊಳಗೆಲ್ಲ
ಅಂತರಂಗದೊಳು ನಾ ಬೀರಿ
ಕೋಗಿಲೆ ಸಂತಸವ ತೋರಿ ಪರಮಾನಂದ
ಜಲಪ್ರಳಯ ಬಂತೆಂದು ಹೇಳು ಕಂಡ ಕೋಗಿಲೆ ೧೭

ಕೋಗಿಲೆ ಜಯತು ಜನನಿಯ ಜನನಮರಣ
ನಿವಾರಿಣಿಯೆ ಜಯತು ಜಗದಾರಾಧ್ಯನರಸಿ
ಕೋಗಿಲೆ ಜಗನ್ಮಾತೆ ಜಯತು ಜಗವಿಖ್ಯಾತೆ
ಜಯತು ಜಯವೆಂದು ಹೇಳು ಕೋಗಿಲೆ ೧೮

೭೯

ಅಂದು ಆನಂದದಿಂ ಆತ್ಮಯೋಗವ ಮಾಡಿ
ಕಂಡು ಕಾತುರದಿಂದ ನಿಂದು ಭವಾನಿಯು

ಮಂದಮನ್ಮಥನೆಂಬ ಅಂಬ ತೆಗೆದು
ಹೂಡಿ ತುಂಬ ತೆಗೆದು ಎಸೆದ ೧

ನೊಂದು ಶಾಪಿಸಿ ಕೃತಯುಗದೊಳು ಸೂಳೆಯಾ
ಗೆಂದು ನಾಲ್ಕನೆಯುಗದಿಂದ
ನಾಮದ ಕರಿಯೆಂದೆಂಬ ನಾಮದಿ
ಕಂಡೆತ್ತಿಕೊಂಬೆ ಬಾರೆಂದು ಅಭಯವಿತ್ತನು ೨

. . . ದು ನಿರ್ಮಿಸಿದೆನು ನಂಜಿ
ಮುಂಡುಕಂದೊರೆಯೆಂಬ ಪರ್ವತದಲ್ಲಿ
ಆನಂದಗುಡಿ ಕಟ್ಟಿ ಚಂದ್ರಶೇಖರನೆಂಬ
ಮನ ಮಲ್ಲಿಕಾರ್ಜುನಲಿಂಗವ ಸ್ಥಾಪಿಸಿದ ೩

ಸಂದೇಹಬೇಡವೊ ಸರ್ವಜ್ಞಲಿಂಗವು ಅಂಗವಿಡಿದು
ಬಂದನಂಗ ನೋಡಿರೊ
ಬಂದು ನಿಂದಳು ಭವಹಾನಿ ಹಾಹಾಯೆಂದು
ಇಂದುವದನೆ ನಂಜಿಯು ೪

ಮುಂದುಗಾಣದ ಮೂಢಜನರಿಗೆ ತಿಳಿಯಬೇಕೆಂದು
ಮಾಡಿದನವ ನಡೆವ ಪರ್ವತವನು
ಅಂದು ಹೇಳಿದನು ಕುಂಬಾರರಾಮನ ನೋಡಿ
ಅಂದವ ನೋಡಿರೆಲೊ ೫

ಸಂದ ಶರಣನು ಸಾನಂದ ಗಣೇಶ್ವರ
ಅಂದೆಮಪುರವ ಸುಟ್ಟುರುಹಿದ
ಇವನಿಗೆ ಹಂದಿಮಾನವರಿರ
ಕರಿಮಲ್ಲಿಕಾರ್ಜುನ ಲಿಂಗವ ನೋಡಿರೆಲೊ ೬

ಇಂದು ಕರೆಯು ಬಂದ ಮಹಿಪುರದರಸು
ಚಾಮೇಂದ್ರನ ಆಳಿನ್ನನೆಳೆವುದ ನೋಡಿರೊ
ಚಂದಚಂದದಿ ಸೂರೆಯಾಡಿದ
ಚಾಮರಾಜೇಂದ್ರ ಕರಿಯ ಬಸವ ೭

೯೦

ರಾಗ ॥ ಪಾಡಿ

ನೋಡು ನೋಡು ಭಕ್ತನಂಜಿಯ ಜಾಣೆ ॥ ಪಲ್ಲ ॥
ಗಾಡಿಕಾತಿಯಾದ ಗಮಕದ ಹೆಣ್ಣ

ಅರ್ಬುತವೇಶವ ತಾಳಲಾಗಿ ತಾ
ಮುದ್ದುಮಾಡಿ ತನ್ನ ನೋಡಿದಳು
ಶುದ್ಧವಾಗಿ ರೌದ್ರವೇಷದೊಳು
ಸಿದ್ಧನಂಜಿಯಾಗಿ ಕೂಡಿದಳು ೧

ನಂಜಿ ನಂಜಿ ನಂಜಿ ನಂಜಾಗಿ
ನಂಜುಂಡಲಿಂಗವು ತಾನಾಗಿ
ನಂಜಿ ಕೂಡಲಸಂಗನಾಗಿ
ಜಯುವೆಂದು ಲೋಕ ಜಗದಂಬಿಕೆಯು ೨

ಸೂಕರಿಯೆಂದು ನೀಕರಿಸಲು ಮನ
ಏಕವಾಗಿಯೆನ್ನೊಳಗಿರಲು
ಏಕೋದೇವ ಕರಿಯಾತ್ಮಸಂಗನೊಳು
ಸಾಕಾರವಡಗಿದ ಶರಣೆಯುನು ೩

೯೧

ರಾಗ ॥ ನಾಟಿ

ತ್ರಾಹಿ ತ್ರಾಹಿ ತ್ರಾಹಿ ತ್ರಾಹಿ ಕಾವೇರಿಯೊಳು
ತ್ರಾಹಿ ತ್ರಾಹಿ ತ್ರಾಹಿ ತ್ರಾಹಿಯೆಂದು
ತ್ರಾಹಿ ಕರಿತುರಗ ಕರಿಯಾತ್ಮ ಕರಿವಸವಂತ
ತ್ರಾಹಿ ಸಕಲಾಗಮುಕತೀತೆ ನೀನೆಂದು ತ್ರಾಹಿ ॥ ಪಲ್ಲ ॥

ತ್ರಾಹಿ ಕರಿಮಾರಿ ಚಾಮುಂಡಿ ಚಂಡಿಕದೇವಿ
ತ್ರಾಹಿ ಮಹಿಪುರ ನರರ ಹೊಸೆದ ಹೊಸದುರ್ಗಿ
ತ್ರಾಹಿ ಭವರೋಗವೈದ್ಯನ ರಾಣಿ ಭವಹಾನಿ
ತ್ರಾಹಿ ಇದೆ ಮೊದಲೆಣ್ಣೆಗಾಸೆಯು ನೀನುಟ್ಟೆ ೧

ತ್ರಾಹಿ ಜಗನ್ಮಾತೆ ತ್ರಾಹಿ ಜಗದ್ಭರಿತೆ
ತ್ರಾಹಿ ಜಗದಂಬಿಕೆಯೆ ತ್ರಾಹಿ ಮುಹಂಕಾಳಿ
ತ್ರಾಹಿ ಜಗದಾರಾಧ್ಯನರಸಿ ಕಾಲಾಂತಕಿಯೆ
ತ್ರಾಹಿ ಕಾಮುನಸತಿಯೆ ನಿಷ್ಕಾಮುರತಿಯೆ ೨

ತ್ರಾಹಿ ಜಯುಜಯುಸಿಂಧು ತ್ರಾಹಿ ಜಯುಜಯುವೆಂದು
ತ್ರಾಹಿ ಭವ ಭವ ಬಂಧು ಭಕ್ತಸಂಜೀವಿ

ತ್ರಾಹಿ ಪಿಂಡಾಂಡ ಬ್ರಹ್ಮಾಂಡ ನಾಯಕಿಯೆಂದು
ತ್ರಾಹಿ ಕರ್ಣಾವ ನಂಜಿ ಮರ್ದನ ಸುಗಂಧಿ ೩

೯೨

ರಾಗ ॥ ಆಹರಿ

ಮುನಿಸ ಮಾಡುವರೆನ್ನ ಪ್ರಾಣ
ನನೆಯೊಳ್ಪರಿಮಳವನರಸುವರೆ ಜಾಣ
ಸುಗುಣವೆಣ್ಣಿಗೆ ಸೊಗಸು ಬಾಣ ನಿನ್ನ
ಬಗೆಯು ತೋರದ ಸುಪ್ರವೀಣ ೧

ಉರವಿಲ್ಲದ ಹೆಣ್ಣ ಕರೆದು ನಿನ್ನ
ಪರಿಪರಿಯು ರತ್ಯಂತವರಿದು
ಇರದೆಹೋದಳುಯೆಂದು ಜರೆದು ಚಿಕ್ಕ
ಮರಿವೆಣ್ಣನೊಳು ಸೊಗಬಡೆದು ೨

ಹಣ್ಣಾಹದ ಮುನ್ನ ಕಸುಗಾಯಿ ಆದು
ಹಣ್ಣಲ್ಲವೆಂಬ ಉಪಾಯ ನಿ
ನ್ನಲ್ಲಿ ಪುಟ್ಟಿತಲೊದೇವ
ಭಲರೆ ಕನ್ನಗಳನು ತಾ ೩

ಸಾಣೆ ಕುದುರೆಯು ತಿವಿದಂತೆ
ನಿರ್ವಾಣ ನಿಜಘಟಿಸಿಯಿಪ್ಪಂತೆ
ಜೇನು ಕೊಡದೊಳು ತುಂಬಿದಂತೆ ಒಲಿದು
ನೀನಾಗಲವಳು ನಿಶ್ಚಿಂತೆ ೪

ಪಾಲ್ಗುಡಿವ ಹಂಸೆ ಕೊಳದೊಳು
ಕೊಳಕು ನೀರ್ಗುಡಿದು ಬಾಳುವದೆ ತಾನು
ಪಾಲು ಸಕ್ಕರೆ ಜೇನನುಂಡು ಬಳಿಕ
ಕೀಳು ಆಹಾರವುಂಬುದೆಂತು ೫

ನನ್ನ ಬಯಸಿದರೆ ನಿನಗುಂಟು ರಾಯ
ನಿನ್ನ ಬಯಸಿದರೆಯೆನಗಿಲ್ಲ
ಅನ್ಯಾಯಕಾರ ಅಪ್ರತಿಮಾನ ದೇವ ೬
ನಿನ್ನ ಕುರುಹೆಂತೊ ನಾನರಿಯೆ

ಹರಿಯು ಹರ ಬ್ರಹ್ಮವೀಶ್ವರನು ಸದಾ
ಪರವು ಪರತತ್ವಗಳ ಹಳಿದು

ದೊರೆಯೆದ್ದು ಹಗರಣವನಾಡೆ ತಿಳಿದು
ಅರಿವುದು ಸಾಧ್ಯ ವಿಗಡೆ ೭

೯೩

ರಾಗ ॥ ಘಂಟಾರಾಗ

ಏಳು ಏಳೆನ್ನರಸಿ ಗೌರಿಯೆ
ಏಳು ಏಳೆನ್ನರಸಿ ಮಲಹರಿ
ಏಳು ಏಳೆನ್ನರಸಿ ಎನ್ನಯ ಪ್ರಾಣನಾಯಕಿಯೆ
ಏಳು ಭವಹರಿ ಭಕ್ತಿ . . ದಿಯೆ
ಏಳು ಬಸವನ ಭಕ್ತಿಲೀಲೆಯೆ
ಏಳು ನೀ ಎನಗಿತ್ತ ನಂಬುಗೆ ವೇಳ್ಯವಾಯಿತು ೧

ಗುರು ಕರಿಯ ಬಸವಾರ್ಯ ದೇವರು
ಪರಮ ಉಪದೇಶವನು ಮಾಡಲು
ನರನ ವೇಷವ ತಾಳಿ ಬಂದನು ಅರಸು ನಿನ್ನೆಡೆಗೆ
ಶರಣಸತಿ ನೀನಾಗಿಬಂದುದ
ಲಿಂಗಪತಿ ತಾನಾಗಿನಿಂದುದ
ಪರವಶವ ನಾ ತೋರಿ ಬಂದೆನು ಪರಮಗುರುವಾಗಿ ೨

ಲಿಂಗ ಕರಿಮಲ್ಲಿಕಾರ್ಜುನಯ್ಯನ
ಅಂಗವಸ್ತ್ರವ ಧರಿಸಿದಲ್ಲದೆ
ಅಂಗನೆಗೆ ಆನಂದ ಘನಗುರು ಅರುಹು ನಮ್ಮಿಂದ
ಬಂದ ಭವಿಯೆಂದೆಂಬ ಭ್ರಮೆಯನು
ನಿಂದು ಸುಟ್ಟನು ನಿರ್ಮಲಾತ್ಮಕ
ಒಂದುವಸ್ತ್ರದಿ ಧರಿಸಿದನು ಮಹಲಿಂಗಕರಿಬಸವ ೩

ದೀಕ್ಷೆ ಉಪದೇಶವನು ಮಾಡಲು
ಆ ಕ್ಷಣವೆ ಆನಂದವಾಯಿತು
ಮೋಕ್ಷವನು ತಾ ಮೀರಿನಿಂದಳು ಮುದ್ದುನಂಜಿ
ಅಕ್ಷಿಪಾತ್ರೆಯ ಪಿಡಿದು ಘನಗುರು
ಭಿಕ್ಷ ಗುರು ದುರ್ಭಿಕ್ಷವನೆ ಚ
ಮಾಕ್ಷಿಮುಚ್ಚಿತು ಸಿದ್ಧನಂಜಿಗೆ ಸಿದ್ಧಿಯಾಯಿತು ೪

ನಾ ಪರಮಗುರುವಾದ ಶಕ್ತಿಯು
ನನ್ನ ಸತಿಯಳು ಕೆಂಪನಂಜಿಗೆ ಅ
ನೇಕವಾಗಿಯೆ ತೋರುವೆನು ಪರಮಾಮೃತದ ರಸವ

ಸೂಸಿ ತೋರುವೆ ಜಗದ ಜಡರಿಗೆ
ಈಕೆ ಪಾರ್ವತಿ ಪರಮನಾಯಕಿ ಅ
ನೇಕವಾಗಿ ಲೋಕವೆಲ್ಲವು ಪೊಗಳಿದರು ಮಹಕಾಳಿ ನಂಜಿಯನು ೫

ಕಾಂತೆ ಕೇಳ್ನಿನ್ನಂತರಂಗದಿ
ನಿಂತು ಆಡುವ ನಿಜದ ಲೀಲೆಯ ಅ
ದೆಂತು ಪೊಗಳುವೆ ಕರಿಯವಸಂತೆ ಕೇಳು
ಸಂತಸದಿ ಅಪ್ರತಿಮಲೀಲೆಯ
ನಿಂತು ಆಡುವ ನಿರ್ಮಲಾತ್ಮಕ ಅ
ದೆಂತು ಪೊಗಳುವೆ ಘನವ ಕರಿಯವಸಂತೆ ಕೇಳು ೬

ಈ ಕಲಿಯುಗ ಅಳಿವುಳಿವ ಹೇಳುವ
ಲೋಕನಾಯಕ ಸಿದ್ಧಬಸವನು ಅ
ನೇಕವಾಗಿಯೆ ತೋರುವೆನು ವಿಷವಾಕಮೃತವಾಕುಗಳ
ಈ ಕಲಿಯುಗಕರಸು ಪಟ್ಟಣ
ಮಹಿಪುರಾನ್ವಿತ ಚಾಮರಾಜನಿ
ಗೇಕ ಮುಖವನು ತೋರಿಮೆರೆದನು ವೀರಬಸವೇಶ ೭

೯೪

ರಾಗ ॥ ವರಾಳಿ

ಕಂಕಣ ತಂದಿಟ್ಟ ಕಾಮಾಕ್ಷಿ ಕಾಮಿನಿಗೆ
ಶಂಕೆಯಳಿದಾ ನಿಶ್ಶಂಕೆ ಕೆಂಪನಂಜಿಯ ಪ್ರಿಯ ಹೊನ್ನಾಂ
ಬಿಕೆಯ ರಮಣ ಕಂಕಣವ ಕೈಯೊಳಿಟ್ಟ ॥ ಪಲ್ಲ ॥

ಅಚ್ಚರಿಯ ರಾಯರಾವುತ ರಾಮರಾಯಂಗೆ
ಮೆಚ್ಚಿ ಬಂದವಳು ಹೊನ್ನಿ
ವಿಸ್ಮಯದ ವೀರವಿಕ್ರಮ ಚಿಕ್ಕಸಿದ್ಧನೆಂದೆತ್ತಿ ಕರಗಳ ಮುಗಿದರು
ಮುಚ್ಚುಮರೆಯಿಲ್ಲ ಮೂಜಗದ ಮುಸುಕನೆ ತೆರೆದು
ಸಚ್ಚಿದಾನಂದಮಹಿಮ ೧
ಬೆಚ್ಚನೈಜಗಕೆ ಆನಂದಲೀಲೆಯ ಬೀರಿ ಚಿಕ್ಕಗುರುಸಿದ್ಧನೆಂದು

ಕಾಯ ಕಮಂಡಲವು ನೆನಹವೆ ನೆಲೆ
ಬಟ್ಟಲೊಳು ತೀವಿದಮೃತವನು ತುಂಬಿ
ದೇವದೇಹಿಕನೆಂಬ ಕಂಟನಾ ಹಿತಗೂಡಿ
ಕಾವೇರಿ ಮಧ್ಯದೊಳಗೆ

ಈ ಮದುವೆ ವಿವಾಹ ಉಚ್ಛಾಹವಿದನೇನೆಂಬೆ
ಸಾಹಸಿಗಳಾದವರಿಗೆ ಕಾವರಾಯನು ಕರಿಯಬಸವ
ನವಖಂಡದೊಳು ದೇವನೊಬ್ಬನೆಯೆನಿಸಿದ ೨

ಹಳೆಗನ್ನಡವ ಚಿಕ್ಕಸಿದ್ಧಬಂದನು
ತನ್ನ ಹಳೆಯಂದಾಗಿರ್ದವರಿಗೆ
ಕಳಶಕುಚಕೋಮಲೆಯು ವಿರಹ ವಸಂತನನು
ಇಳೆಗೆ ಅತಿಚೋದ್ಯವಾದ
ತಳತಳಿಪ ಹದಿನಾರುಕಳೆದೋರಿ
ಕಲಿಯುಗವ ತುಳಿದು ಅಪ್ರತಿಮಲಿಂಗ
ಎಳೆಯು ಎಮ್ಮಯ್ಯ ಇಪ್ಪತ್ತೊಂದು ಸಹಸ್ರಯುಗ
ಅಳವಳಿಸಿ ತಾನಾಳಿದ ೩

೯೫

ರಾಗ ॥ ಘಂಟಾರಾಗ

ನಂಜಿ ನಿನಗಂಜುವೆ ನಾನೆಂದು ಬಿನ್ನಹವಮಾಡೆ
ಅಂಜಬೇಡೆಂದಭಯವಿತ್ತೆ
ಕುಂಜರನ ಒಳಗುಮಾಡುವ ತೆರದಿ ನಾ ನಿನ್ನ
ಮಂಜುಹರಿವನಕ ನಾ ನಿನಗಂಜಿದೆನು ನಂಜಿ ೧

ಪ್ರಥಮದಲಿ ನಾ ನಿನಗೆ ಸ್ತುತಿಸಿ ಬಿನ್ನಹಮಾಡೆ
ಪ್ರತಿಉತ್ತರವ ನುಡಿದೆ ಮಂತ ಸಡಲಿ ನೀನು
ಹತವಾಗಿಯೆನ್ನ ಮನ ಖತಿಗೊಂಡು ನೀ ನನ್ನ
ಸತಿಯಲ್ಲವೆಂದು ಬಿಟ್ಟುದನರಿಯು ಕಾಂತೆ ೨

ನೀ ಎನಗೆ ವಿನಯವಚನವ ನುಡಿದು ನಂಜಿ
ಇದೇನು ತಪ್ಪಿಲ್ಲ ತಾನೇಕೆ ತಡೆದಿಹನು
ತಾನಲ್ಲದನ್ಯವಿಲ್ಲೆಂದು ನನ್ನವರೊಳಗೆ
ತಾನು ಬಿನ್ನಹವಮಾಡೆ ನಾನಾಗಿ ಬಂದೆ ೩

ನನ್ನಿಂದ ನಿನಗೆ ದುಃಖಗಳುಂಟು ಬಾರೆನ್ನ
ಚಿನ್ನವೆ ಬಾರೆಂದು ಬಿನ್ನೈಸಿದೆ
ಚಿನುಮಯನೆ ಅನುಮಾನ ಬೇಡ ಸೂಕರನಲ್ಲ
ನಿನಗೆ ಸರಿಯಾದ ಮದಗಜಮನೆ ನಾನು ೪

ಧನಪತಿಯೆ ದಂಡನಾಯಕ ಬಸವ ಬಾರೆಂದು
ತನುವ ಕರದೊಳು ಪಿಡಿದೆ ವಿನಯದಲಿ ನಾನು
ವಸ್ತ್ರಕಾರವ ತಂದು ಒಸಗೆ ವೀಳ್ಯವಿದೆಂದು
ಪತ್ರಕಟ್ಟಿದೆ ಭಕ್ತಿ ಬಂದ ಬಂದಿಯನು ೫

ವನಿತೆ ಕೇಳ್ನಿನಗೆ ನಮಸ್ಕರಿಸಿ ಬಿನ್ನಹ ಮಾಳ್ಪ ಅರುಹು
ನಿನಗುಂಟೆ ಗಜಾರಣ್ಯಮಧ್ಯದೊಳು
ನನಗೆ ನಿನ್ನನೆಯಿತ್ತು ನಿನಗೆ ನನ್ನನೆಯಿತ್ತು
ಘನಮಹಿಮ ನಿನಗೆ ನನ್ನ ಮದುವೆಮಾಡಿದನು ೬

ಹೆಣ್ಣಬೇಕೆಂದು ತನ್ನಿಚ್ಛೆ ಬಂದಾಗಿಹುದು
ಕನ್ನೆವೆಣ್ಣಾಗಿ ಕಟ್ಟು ಹರಿದು ತಿರುಗುವದೆ
ಸಣ್ಣಕಲ್ಲನು ಹೊತ್ತು ಮರೆವೆಣ್ಣು ತಿರುಗುವದು ದೊರೆ
ವೆಣ್ಣು ಕಲ್ಲನು ಹೊತ್ತು ತಿರುಗುವದು ಉಂಟೆ ೭

೯೬

ರಾಗ ॥ ಕೇತಾರಗೌಳ

ಇಂತು ಮುನಿವರೆ ನೀನು ಇನ್ನು ನೀನಳಿಯೆ ಮುಂದೆ
ಸಂತವಿಟ್ಟುಳುಹೊ ಬಂದು ಸದ್ಗುಣಸಿಂಧು ॥ ಪಲ್ಲ ॥

. . . ಬಯಸಿ ಚಿಂತೆಯಮಾಡಿ ೧
ಉರಿಉಸುರೊಳು ನಿಂತು ಉಷ್ಣದೊಳಿಂತು

ಕರಗಿದಂದಂಗವು ಕನಸಾಯಿತನ್ನವು ೨
ಮರುಳಿಡೆಗೊಂಡಿತು ಮಾತು ನಿಂದಿತು

ಇನಿತು ಕಂಡು ನಾ ಬಂದೆ ಇನ್ನು ನೀನಳಿಯೆ ಮುಂದೆ ೩
ತನುವ ಮಾರುವದೊಂದು ಮರಣವುಂದು

ವನಿತೆಗಾವಿಲ್ಲದೀಗಯೆಂದು ಕೇಳಿ ಇನೆಯು ೪
ಮುಂದುಗೊಂಡು ನಡೆತಂದ ಮುದದಿ ಬೇಗ

ಮಂದಿರದಿ ಕೇಳುವೆಯು ಪೊಸಬಗೆದೋರಿದನು ೫
ಬಂದು ದೇವರದೇವೇಶ ಬಣ್ಣಿಸ ಲೇಸ

೯೭

ರಾಗ ॥ ಮಧುಮಾಧವಿ

ಪ್ರಾಣನಾಯಕ ಬಾರೊ ಮನೆಗೆ
ಕಾಣದಿರಲಾರೆ ಕಾತುರ ಹೆಚ್ಚಿತೆನಗೆ ॥ ಪಲ್ಲ ॥

ಸೊಗಸುಳ್ಳ ಪೊಂಬಣ್ಣ ಮೈಗೆ ಜಗ
ಮಗಮಗಿಪ ಚಂದನವ ಲೇಪನವ ಮಾಡೊ
ಮಿಗೆ ಜಾಜಿ ಮಲ್ಲಿಗೆಯ ಸೂಡೊ
ಅಗಲಿರಲಾರೆ ಆವಾಗ ಮುಂಡಾಡೊ ೧

ಪೊಳೆವಧರವ ಚುಂಬನವ ಮಾಡೊ
ಗಳರವದಿ ಬಿಗಿಯಪ್ಪಿ ಗಮಕದಿಂ ಕೂಡೊ
ಆಳಿಗುರುಳ ಪಿಡಿದು ಮುಂಡಾಡೊ
ಒಳಗಾದೆ ನಿನಗೆ ಬೇಕಾದುದನು ಬೇಡೊ ೨

ನೆರೆ ಮೆಚ್ಚಿದೆ ನಿನಗೆ ವಿಟರನ್ನ
ಮರೆಬೇಡ ಸವಿಗಲೆಯ ತೋರೊ ಮೋಹನ್ನ
ಗಾರು ಮಾಡುವರೆ ಹೀಗೆನ್ನ
ನೀರೆಯೊಳು ಮುನಿಸು ನೀತವೆ ಗುಣರನ್ನ ೩

ಪಿಡಿದೆಳೆಯೊ ಸೆಳೆಮಂಚದೆಡೆಗೆ
ಜಡಿದು ಕಳೆವಲ್ಲಿ ಕಾಂಚಿದಾಮವನು ಕಡೆಗೆ
ಪಿಡಿ ಉಗುರ್ಗೊನೆಯ ಮೊಲೆಗಳಿಗೆ
ಕುಡುಕುಡುಬುಲವಿತ್ತು ಕೂಡೊಂದು ಘಳಿಗೆ ೪

ಧರೆಗಧಿಕ ಕರಿವಿಪಿನವಾಸ
ನೆರಜಾಣ ಭಕುತರಿಗೆ ಮುಕುತಿ ಮನದೀಶ
ನೆರೆದು ಮನ್ನಿಸಿದೆ ವಿಲಾಸ
ಸ್ಮರಹರನೆ ಕರಿಯಬಸವೇಶ ಪ್ರಾಣೇಶ ೫

೯೮

ರಾಗ ॥ ಯಾಲಪದ

ಕರುಣದಿಂಧ ಕಾವೇರಿ ಮಧ್ಯದೊಳಗೆ ನಿಂದ
ಪರಿಯ ವಿವರಿಸಿ ತೋರುವೆ ನಾನು ಓ ಸಿದ್ಧಬಸವ
ಕರುಣ ಕೃಪಾಂಗಲಿಂಗವು ೧

ಆರಕಲಗೂಡೆಂಬುದೊಂದು ಆರುವ ಕಾಲವು ಬಂದು
ಪರವೆಯೊಡನೆ ಕೂಡಿದ ಸಿದ್ಧ ಬಸವ
ಪರವು ಗೀರ್ವಾಣಲಿಂಗ ೨

ನಾನು ನೀನೆಂಬುದಳಿದು ನಾನೆ ನಾರಾಯಣನಾದೆ
ನಾನೆ ವೆಂಕಟಪತಿಯು ಸಿದ್ಧಬಸವ
ನಾನೆ ಗೋಪಾಲಕೃಷ್ಣನು ೩

ನಾನೆ ನಾನಲ್ಲದನ್ಯವಿಲ್ಲೆಂಬ ಕಂಭವನಟ್ಟಿ
ನಾನೆ ವಸಂತನಾಳೆಂದು ಸಿದ್ಧ ಬಸವ
ನಾನೆ ಮಧು ತಾನೆನಂತ ೪

ಗೋಪಾಲಕೃಷ್ಣನೆಂದೆಂಬ ಗೋವಿನ ಕಂಬವ ನೆಟ್ಟಿ
ಗೋಪತಿರಮಣನೆಂದು ಸಿದ್ಧಬಸವ
ಗೋಕುಲದೊಳಗೆ ನಿಂದು ೫

ಗೋವಿಂದ ಗೋವಿಂದರಾಜ ಗೋಹೆಸೊಯಲಿಂಗವಾದ
ಗೋವಿ ಗೋವಿಂದವುಯನು ಸಿದ್ಧಬಸವ
ಗೋವಿಂದಾ ವೃಘೆಯೆನ್ನುತ ೬

ಕಂಬವ ನಟ್ಟ ಪರಿಯು ಲಿಂಗ ನಿಜಾನಂದವು
ಅಂಬರಕ್ರೂರರನೇನೆಂಬೆ ಸಿದ್ಧ ಬಸವ
ಶಂಬರಾರಿಯು ವಸಂತ ೭

ಗಿಸಿಬಾಜನೆಗಳು ಆಂಗಿಸಿ ತವ್ಮೊಳು ತಾವು
ಕಂಬಸೂತ್ರದೊಳೆಲ್ಲವು ಸಿದ್ಧ ಬಸವ
ಕುಂಭಿನಿ ಕುಣಿದಾಡಿತು ೮

ಮಥನಿಸುವ ಮಂತ ಹೂಡಿ ಸ್ಥಿತಿಲಯಗಳೆಲ್ಲವನ್ನು
ಪ್ರತಿ ಆತ್ಮನೆಂಬ ನೇಣಲಿ ಸಿದ್ಧಬಸವ
ಮಥನಿಸಿ ನಿಂದು ಕಾಡಾದ ೯

ತತ್ವಾ ತೆಯು ತೇಯು ತತ್ತ್ರವೆಂಬ ಕೌತುಕಟ್ಟಳೆಯಿಂ
ನಟಣೆಯಿಂದಾಡಿಸಿದನು ಸಿದ್ಧಬಸವ
ಚಿಟಿ ಚಿಟಿ ಭುಗಿಲೆನ್ನುತ ೧೦

ಶಂಕೆಯು ಮಾನವರನ್ನು ಬಿಂಕವ ಮುರಿದು ತಾನೆ
ಅಂಕುಶರಾಯನೆಂದೆನುತ ಸಿದ್ಧಬಸವ
ಕಂಕಣವ ಕಟ್ಟಿ ನಿಂದನು ೧೧

ಮಂಕುಮಾಡಿ ಮರವೆಯ ಮರುಳಮಾನವರನ್ನು
ಅಂಕುಶದೊಳಾಡಿಸಿದನು ಸಿದ್ಧಬಸವ
ಕಿಂಕಿಣಿ ಕಿಣಿ ಕಿಣಿಯೆನ್ನುತ ೧೨

ತ್ರಾಸವಿಟ್ಟು ತೂಗಲೆಂದು ಕಾಸೆಯನ್ನು ಕಟ್ಟಿನಿಂದ
ರಾಶಿದೈವದಗಂಡನು ಸಿದ್ಧಬಸವ
ಮೋಸವ ಮಾಡಿ ಕೊಂದನು ೧೩

ತ್ರಾಸಿನಕೊಂಡಲದೊಳು ಸಿಕ್ಕಿ ಸೆರೆಯಾಗಿ ತಮ್ಮ
ಹೇಸಿಕೆಗಳ ತಿಂದರು ಸಿದ್ಧ ಬಸವ
ದೇಶದೇಶಗಳೆಲ್ಲವು ೧೪

ಶಸ್ತ್ರವಪಿಡಿದು ರಾಯ ವಿಸ್ತರಿಪ ವಿಷಯೆಂವ
ಕತ್ತರಿಸಿದುದನೇನೆಂಬೆ ಸಿದ್ಧ ಬಸವ
ಕತ್ತುರಿಯ ರಾಯನೆನ್ನುತ ೧೫

ಸತ್ತುಹೋಹ ಸಕಲಗಣಂಗಳೆಂಬವರ ಗಂಡ
ರಕ್ತದೋಕುಳಿ ವಸಂತ ಸಿದ್ಧಬಸವ
ಕತ್ತುರಿಯರಾಯನೆನ್ನುತ ೧೬

ಇಂತೀ ನವಖಂಡ ಜಂಬುದ್ವೀಪಕೆ ವಸಂತರಾಯ
ಅಂತಕನಾಗಿ ಬಂದನು ಸಿದ್ಧಬಸವ
ಪಂತಪಾಡನು.ಮಾಡಿದ ೧೭

ಭ್ರಾಂತು ಬ್ರಹ್ಮಹತ್ಯಾಕಾರವಾಂತು ಕರಿವೀರ
ಜಯವೆಂದು ಲೋಕಂಗಳೆಲ್ಲವು ಸಿದ್ಧಬಸವ
ಓರಂತೆ ಪಲ್ಗಿರಿವುತೆಲ್ಲ ೧೮

೯೯

ರಾಗ ॥ ಸೋಬಾನ

ಅರಕಲಗೂಡೀದ ಅರುಹು ಕುರುಹು ಕಂಡು
ಮರವೆಯನೆಲ್ಲ ತರಿದಿಟ್ಟು ಪುಷ್ಪಮ್ಮ
ಹರದಿ . . . ಯರಿದಳು ಹಸೆಗೇಳೆ । ಸೋಬಾನ ೧

ಆದಾಯುವರಿದಂಗೆ ಭೇದವ ತಿಳಿದಂಗೆ
ಮಾದಾರರಲ್ಲಿ ಮದವಳಿಗ ಪುಷ್ಪಮ್ಮ
ಮೇದಿನಿಪತಿಯೆ ಹಸೆಗೇಳು। ಸೋಬಾನ ೨

ನಿತ್ಯನ ಕೈಪಿಡಿದು ಸತ್ಯವ ಸಾರುತ
ಸತ್ತು ಹುಟ್ಟುವರ ತುಳಿವುತ ಪುಷ್ಪವ್ವ
ನಿಸ್ತ್ರೆಯೇರಿದಳು ಹಸೆಗಳ । ಸೋಬಾನ ೩

ಬಸವನ ಕೈಪಿಡಿದು ಹೊಸದೊಳು ಕರ್ಮವ
ಶಶಿಮುಖಿಯರ ಮುಕುಟವೆ ಪುಷ್ಪವ್ವ
ಹಸುಳೆಯೇರಿದಳು ಹಸೆಗಳ । ಸೋಬಾನ ೪

ಹಸೆಯ ಮಂಟಪಕೆ ಅಸಮಾಕ್ಷ ತಾ ಬಂದ
ಹೊಸಮುತ್ತು ಜಾಜಿ ಕುಸುಮವ ಕೈಪಿಡಿದು
ಅಸಮಾಕ್ಷನೆಡೆಗೆ ನಡೆದಳು । ಸೋಬಾನ ೫

ಬ್ರಹ್ಮಾಂಡದ ಕೀಲು ನಮ್ಮ ವಶವಾಯಿತ್ತು
ಕನ್ನೆ ನೀನೇಳು ಕಡೆಯೆಂದು ಮಾಂತನು
ನಮ್ಮಯ್ಯ ಕೊಟ್ಟು ಕರವೆತ್ತಿ । ಸೋಬಾನ ೬

ದೇವಕೋಟಿ ಕೈಕೊಂಡು[ನಿಂದುದು]
ಆವಯುವ ನೋಡಿ ನಸುನಕ್ಕು ಪುಷ್ಪವ್ವ
ರಾಯನಿದ್ದೆಡೆಗೆ ನಡೆದಳು । ಸೋಬಾನ ೭

ಕೂಡಿದಬಲವನು ನೋಡಿ ನಮ್ಮ[ಯ್ಯ]
ರೂಢಿಗಪ್ರತಿಮ ಕರಿರಾಯ ಪುಷ್ಪವ್ವ
ಕೂಡಿ ಆಡಿದರು ಸಭೆಯೊಳು । ಸೋಬಾನ ೮

ಆಡಿದಮಾತಿಗೆ ನೋಡಿ ನಮ್ಮವರೆಂದು
ರೂಢಿಗಿದು ಚೋದ್ಯ ಭಲರೆಂದು ಕರಿರಾಯ
ಕೂಡಿಯಾಡಿದರು ಸಭೆಯೊಳು । ಸೋಬಾನ ೯

ರಾಜರಾಜರ ಗಂಡ ರಾಜರಾಜರಮಿಂಡ
ರಾಜರಿಗೆ ರಾಜ ಕರಿರಾಜ ಪುಷ್ಪವ್ವ
ರಾಜಹಂಸಗಮನೆ ಹಸೆಗೇಳು । ಸೋಬಾನ ೧೦

ಜಯ ಜಯ ಜಯವೆಂದು ಜಯ ಚಾಂಗು ಭಲರೆಂದು
ಜಯ ಜಗನ್ಮಾತೆ ಭವಹಾನಿ ಭವದೂರೆ
ಜಯ ಸಿದ್ಧನಂಜಿ ಜಯಜಯ । ಸೋಬಾನ ೧೧

೧೦೦

ರಾಗ ॥ ಘಂಟಾರಾಗ

ಹೇಳಲೆನ್ನಳವಲ್ಲ ಹೆಡತಲೆಯೊಳಗಿಪ್ಪ
ಕಾಳ ಬಸವರಾಜನು
ಕಾವೇರಿ ಮಧ್ಯದಿ ನಿಂದ ಆನಂದವ
ಹೇಳುವರಳವಲ್ಲವು ॥ ಪಲ್ಲ ॥

ಕರಿ ಕರಿ ಕರಿದೆಂದು ಕರಿಯ ಚರ್ಮವ ಪೊದ್ದು
ಕರಿಯ ವಸವಂತನು
ಕರೆದು ಸೂಕರಿಯ ಮೈದಡವಿ ಮನ್ನಿಸಿದನು
ಕರಿವೀರ ಬಸವೇಶನು ೧

ಹರಿಯ ಕಣ್ಣನು ಕಿತ್ತು ಹರನ ಕಾಲೊಳು ಮೆಟ್ಟಿ
ಶಿರವ ಛೇದಿಸಿ ಬ್ರಹ್ಮನ
ಶಿರಕೆ ರುಂಡಮಾಲೆಯ ಧರಿಸಿ ಮೆರೆದ ನಮ್ಮ
ಕರಿವೀರ ಬಸವೇಶನು ೨

ರಂಭೆ ಮೇನಕಿಯು ಊರ್ವಶಿ ಮೂವರುಗೂಡಿ
ರಂಗಮಧ್ಯದಲಿ ನಿಂದು
ಮಂಗಳಾರತಿಯನೆತ್ತಿದರು ಸಂಗಯ್ಯಗೆ
ಮಾಂಗಲ್ಯವಾಯಿತೆಂದು ೩

೧೦೧

ರಾಗ ॥ ಮಾಸ್ತಿವಚನ

ಇಂದಿಗೆಂಟುದಿನ ಗಂಡ ಸತ್ತನೆಂದು
ಮಂಡಲದೊಳಗೆ ಮೆರೆದ ಮಹಾಮಾಸ್ತಿಯ
ಕಂಡವರಿಲ್ಲ ಧರೆಯೊಳಗೆ ೧

ಮಾರಿಕರಿಯಮ್ಮನು ವೀರಮಾಸ್ತಿಯಾಗಿ
ಧಾರಿಣಿಯೊಳಗೆ ಮೆರೆದ ಮಹಾಮಾಸ್ತಿಯ
ಆರು ಕಾಣದೆ ಮೆರೆದರು ೨

ಸೋಮವಾರವಿದು ಕಾಮನ ಹಬ್ಬವು ಬಂದು
ಕಾಮಿನಿ ನಿನ್ನ ಗಂಡ ಕರೆದು ಕೊಡುವೆನೆಂದು
ಆ ಮಹಿಮಾಮಯನೆನಗುಸುರಿದ ೩

ಜಾಗರವಿರಬೇಕೆಂದು ಜಾಣರ ದೇವನಿಗೆ
ಈಗ ನಮ್ಮತ್ತೆ ಮಾವಯ್ಯ ಮೈಗರೆದು
ಜಾಗರಕೆ ಎನ್ನ ಶೃಂಗರಿಸಿ ೪

ಉಟ್ಟೆನು ಪೀತಾಂಬರವ ಕಟ್ಟಿದೆನು ಕಂಕಣವ
ಗಟ್ಟಿಸಿದ ಕಾಸೆ ಬಿಗಿದುಟ್ಟು ಕರಿಯಮ್ಮ
ರತ್ನದ ಮಂಟಪಕೆ ಅನುವಾದ ೫

ಕಡೆಹಾರವ ಪಿಡಿಕೊಂಡು ಗುಡಿಗುಡಿಗುಡಿಸುತ
ನಡೆದಳು ಹಸೆಯ ಮಂಟಪಕೆ ಕರಿಯಮ್ಮ
ಕಡೆಯಾಟವೆಂದು ಕರವೆತ್ತಿ ೬

ರತ್ನದ ಮಂಟಪದಲ್ಲಿ ಮುತ್ತಿನ ಹಸೆಯಮಣೆ
ಕಸ್ತೂರಿಗಂಧಿ ಕರಿಯಮ್ಮ ಬಾರೆಂದು
ಮುತ್ತಿನ ಗದ್ದುಗೆಯಲ್ಲಿ ಇರಿಸಿದರು ೭

ಒಂದು ರಾತ್ರೆ ಒಂದು ಒಂಬತ್ತುಯುಗವಾಗಿ
ಗಂಡನ ಹಾಡಿ ಕೊಂಡಾಡಿ ಕುಣಿದಳು
ಚಂಡಿಕದೇವಿ ಕರಿಯಮ್ಮ ೮

ಬೆಳಗ ಹಾರೈಸುತ್ತ ಗಳಿಗೆ ಒಂದ್ಯುಗವಾಗಿ
ಕಳಸಕುಚಗಳು ಬಿಗುವೇರಿ ಕರಿಯಮ್ಮ
ಎಳೆಯನ ಹಾಡಿ ಕುಣಿದಳು ೯

ಬೆಳಗಿನ ಕೋಳಿಕೂಗಿ ಎಳೆಯನೊಳೊಡಗೂಡಿ
ಕಳೆದೋರಿ ಕರುಣಾರಸ ಸೂಸಿ ಕರಿಯಮ್ಮ
ಬೆಳಗಾಯಿತೆಂದು ನಸುನಕ್ಕು ೧೦

ಮೋರ್ತವಮಾಡಿದಳೆಂದು ಮೂರು ಲೋಕಂಗಳು
ಆರತಿಯ ಹೊತ್ತು ಬರುತದೆ ಜಗವೆಲ್ಲ
ಸೂರೆಯಾಯಿತೆಂದು ಮರೆಯದೆ ೧೧

ಶಶಿಯಸ್ತಮಯವಾಗಿ ಭಾಸ್ಕರನುದಯವಾಯಿತ್ತು
ಬಸವ ಬಸವಂತ ಉಘೆ ಚಾಂಗು ಭಲರೆಂದು
ದೆಸೆಯೆಂಟು ದಿಕ್ಕೆಲ್ಲ ಹೊಗಳಿತು ೧೨

ಅಸಮಾನದ ಮೈಸೂರು ವಶವಲ್ಲ ಮನುಜರಿಗೆ
ದೆಸೆಯೆಂಟು ದಿಕ್ಕೆಲ್ಲ ನಡುಗಿತ್ತು ತಲ್ಲಣಿಸಲೆ
ಅಸಮಾಕ್ಷ ಬಸವ ತಾ ಬಂದ ೧೩

ವೀರವಸವಂತನು ಧಾರಿಣಿಗಿಳಿದನು
ಕ್ರೂರ ಮೈಸೂರ ಕುರಿಗಳ ಕಡಿದುದೆ
ಧಾರುಣಿಗಿದಾ ವಸಗೆಯು ೧೪

ಅಭವನಭಯುವನಿತ್ತು ಆಯುಧವ ಕೈಲಿತ್ತು
ನಂಜಂಡನಾಣೆ ಶಿವನಾಣೆ ಕರಿರಾಯು
ನಿಮಗೆತ್ತಿ ಕೊಟ್ಟ ಅಭಯುವ ೧೫

ಧರೆಯು ಹೊಯಿದ ಕರವು ಗಿರಿಯುಯೆಂಚ್ಚ ಅಂಬು
ಕರಿಯುಬಸವನ ನುಡಿಯಿದು ನೀವು ಕೇಳಿ
ಉಂಟುಂಟು ಮುಂದೆ ಪುಸಿಯಲ್ಲ ೧೬

ನಂದನಸಂವತ್ಸರದ ಮುಂದಣ ಸಂವತ್ಸರದಲಿ
ಒಂದನು ವೀರವಸವಂತ ನರಕಿಗಳ
ಒಂದುಳಿಯುದಂತೆ ಸದೆಬಡಿದು ೧೭

ಹಗರಣವಾದೀತು ಹಾರೈಸಿದವರುಳಿದರು
ದೇವದುಂದುಂಭಿಯು ಮೊಳಗವು ಬಸವಯ್ಯ
ಬೇಗದಲಿ ಮರ್ತ್ಯಕಿಳಿವ ೧೮

ಅಂದಿಗೆ ಇಂದಿಗೆ ಎಂಬ ಸಂದೇಹವ ಬಿಡಿರೆಲೊ
ಇಂದು ನಮ್ಮಯ್ಯ ಒಸಗೆಯು ಉಸಿರೆಂದು
ನಂಬುಗೆಯು ಕೊಟ್ಟು ಕಳುಹಿದ ೧೯

೧೦೨

ರಾಗ ॥ ಮಧುಮಾಧವಿ

ನಿಂದಡಿಯು ತೊಲಗುವವ ನಾನಲ್ಲ ಕುಹಕ
ಹಂದಿಗಳ ಕೊಂದಲ್ಲದಡಿಯನಿಡಲೊಲ್ಲೆ ॥ ಪಲ್ಲ ॥

ಕುರುಹು ಕಾವೇರಿ ಮಧ್ಯದಲಿ ಮಾಳ್ಪ
ಅರುಹ ತೋರುವೆನು ಪರಮಾತ್ಮನೆಂದೆಂಬ
ಸುರೆಯುವನು ಕುಡಿದಾತ್ಮಲಿಂಗ ಸೂ
ಕರನಹೆನು ತೋರದಿರ್ದಡೆ ಅಂತರಾತ್ಮ ೧

ವೈರಿಗಳ ಕೊಂದು ಮುಂದಡಿಯನಿಟ್ಟು
ವೈರಿಗಳು ಉಘೆ ಚಾಂಗು ಭಲರೆ ಭಲರೆಂದು
ಓರುಂತೆ ಪರಿವುತೆಲ್ಲ ಧಾರಿಣಿಯು ಮೇಲೆ
ನಡೆದುದೆಯೆನ್ನ ಪಂಥ ೨

ಉಗಹಾದಿ ತಿಂಗಳಿಂದತ್ತ ಕರ್ಮಯುಗವಡಗಿ
ಉಘೆ ಚಾಂಗು ಭಲರೆ ಭಲರೆಂದು
ಹಗರಣದ ಹಬ್ಬ ಪಸವಂತರಾಯು
ಧರೆಗಿಳಿದನೆಂದು ಧರೆ ಕೊಂಡಾಡಿತಲ್ಲ ೩

೧೦೩

ರಾಗ ॥ ಪಾಡಿ

ಬ್ರಹ್ಮಕಪಾಲಕಾಹುತಿಯಾಯಿತು ಗುರು
ನಿರ್ಮಲ ನಿಜದಾನಂದದಲಿ ॥ ಪಲ್ಲ ॥

ಪ್ರಾರಂಭ ತನ್ನ ಹೆಣ್ಣಿನ ನಾಲಿಗೆಯು ನಿಟ್ಟುರದಿ
ಆತ್ಮನೆಂಬಾಯುಧದಿ
ನಾಲಿಗೆಯುನು ಕೊಯಿದ್ದಾಕಿ ಬಲಿಯುನಿತ್ತು
ಲೀಲಾನಂದೆನಗಾಯಿತಲ್ಲ ೧

ಕರ್ಮವೆಂದೆಂಬ ಕಪ್ಪರದಲಿ ಬ್ರಹ್ಮವು
ಒಮ್ಮನದಿಂದಲಿ ಅಡಗಿರ್ದು
ಕರ್ಮವ ನುಂಗಿತು ಬ್ರಹ್ಮವ ಸೂಸಿತು
ನಿರ್ಮಲ ನಿಜದಾನಂದದಲಿ ೨

ಆತ್ಮನುಡಿದನೆಂಬಾತ್ಮನನೆನ್ನಯು
ಆತ್ಮನೆ ಕಳವಳ ಕನಸುಗಳ
ಆತ್ಮನೆ ಮಾರುವ ಸೊನ್ನಾಸುರೆಯುವನು
ಆತ್ಮನ ತುಳಿದು ನಿಜಾತ್ಮನಾದ ೩

ಪರಿಪರಿ ಸೂಕರ ಪರಿಪರಿ ಶ್ವಾನನು
ಪರಿಪರಿ ಮದಕರಿ ಬಸವುಗನು
ಪರಪರವಸ್ತು ಪರಂಗಿವಸಂತನು
ಧರೆಗಿಳಿದನು ಜಯುಜಯುವೆಂದು ೪

ಜಯು ಜಯು ದೇವತ್ವವ ಸುಟ್ಟಭವನೆ
ಜಯು ಜಯು ದೇಹಿಕ ದೇವುಗನೆ
ಜಯು ಜಯು ದೇವಿಯು ವಲ್ಲಭರಾಯುನೆ
ಜಯು ಜಯು ಮದಕರಿ ಬಸವುಗನೆ ೫

ಜಯು ಜಯು ಚೌಕಲೆಮಧ್ಯದಿ ನಿಂದನೆ
ಜಯು ಜಯು ಚೌದಂತಿಯುನೆತ್ತಿ

ಜಯ ಜಯ ಕಪ್ಪಿನ ಕೆಂಪಿನ ನಂಜಿಜುವೆ
ಜಯ ಜಯ ಜಯ ಉಘೆ ಉಘೆಯೆಂದು ೬

ಅಂಗವಳಿದು ಪರಂಗಿಯಾದ ಆತ್ಮ
ಲಿಂಗವೆಂದೆಂಬ ಡೋಣ್ಣೆಯ ಪಿಡಿದು
ಭಂಗಿಸಿ ಮರವೆಯ ಮಂಡಕೆಗಳನೊಡೆದನು
ಚಂದ್ರಶೇಖರನೆಂಬ ಮಾಸಾಳು ೭

ಈ ಪರಿಯಲಿ ಗುರುಪರಮಾರಾಧ್ಯನು
ಆ ಪರಪರವೆಂಬ ಅಂಗವೆತ್ತಿ
ಈ ಕಲಿಯುಗ ಕರ ನಾಲಿಗೆಯನು ಕಿತ್ತ
ಪರಮನ್ನ್ಯಪನಂಗಿಯೆಂಬ ೮

ಎಡದ ಭಾಗದಲಿ ಮೆಟ್ಟಿದ ಚಮ್ಮಾವು
ಬಲದಿ ಪುಷ್ಪಾಂಜನೆಯೆಂಬವಳು
ಬಲಭಾಗದಲಿ ಮೆಟ್ಟಿದ ಚಮ್ಮಾವುಗೆ
ಬಲುಮೆಯ ನಂಜಿಯೆಂದೆಂಬುವಳು ೯

ಕರದಲ್ಲಿ ಕಪ್ಪರಪಿಡಿದ ತ್ರಿಶೂಲವು
ಅರಿವ ಚಕ್ರವ ಬೆಸದೆಸೆದಿಹನು
ಹರ ಹರಿರಾಜ್ಯವನಾಳಂತಿಹನು ನಮ್ಮ
ಅರಸುಕುಮಾರ ವಸವಂತನೆಂಬ ೧೦

೧೦೪

ರಾಗ ॥ ಶಂಕರಾಭರಣ

ಹೇಳಲಳವಲ್ಲ ಕೇಳಲಳವಲ್ಲ
ಹೇಳುವನು ಕೇಳುವನು ನಾನು
ಕಾಳಬಸವನು ಕಟ್ಟಾಳು ಮಾಡುವ [ಖೂಳ] ರಿಗಳವಲ್ಲವು ॥ ಪಲ್ಲ ॥

ಆಜನ ಕಾವರಿಲ್ಲವೆಂದೆಂಬ ಬ್ರಹ್ಮಾಂಡದ
ಭಜನೆಗಳನು ಸುಟ್ಟು ಬಾಹ್ಯದಲವನಹಿ
ಮಂದಕರಿ ಬಸವುಗನೆಂಬದೊಂದೆತ್ತಿಲಿ ಹದಗೊಳಿಸಿದ ಭೂಮಿಯ
ಮಂಜಭಾಪುರೆಯ ದ್ವಾದಶವು ಹನ್ನೆರಡಕ್ಕೆ
ಪ್ರಜೆಯು ಉತ್ಪತ್ಯವಾಯಿತು ಪ್ರಾಜೋತ್ಪತ್ಯ
ಉಗಹಾದಿ ಅಮವಾಸೆ ತದಿಗೆಯಿಂದತ್ತತ್ತ ಹದಗೊಳಿಸಿದ ಬೀಜವ ೧

ಭಕ್ತಿಯೆಂದೆಂಬ ಬೀಜವ ಬಿತ್ತಿ ಬ್ರಹ್ಮಾಂಡ
ಚಿತ್ತವಂ ಮನದ ಬೆಳೆಯು ಬೆದೆಯಾಯಿತ್ತು
ಕಿತ್ತುಬಿಸುಟು ಎಣೆಯುದೆತ್ತುಗಳ ಮೇಯಿಸುತ್ತ ತಾನಾಡಿದನು
ಅರ್ತಿ ಆನಂದದಿ ಗೊಂಡಗವುಡ ತನ್ನ
ಚಿತ್ತದ ಜನಗಳ....
ಎತ್ತಿಮುಂಡಾಡಿ ವಸಂತನಾಮವನಿಟ್ಟು ಪಟ್ಟವಗಟ್ಟಿದನು ೨

ಹಿಂದಣ ಹನ್ನೆರಡೊರುಷ ಮಾಡಿದ ಸೇವೆ
ನಿಂದಕ ಹಂದಿಗಳಿಗೆ ಸನ್ಮತವಾಗಿ ಮುಂದೆ ನಾ
ಪೊಂದುಗಳಿಗೆ ಮಾಡುವ ಸೇವೆ ಅಂದವನೋಡಿರೆಲ್ಲ
ಒಂದು ಘಳಿಗೆ ಹನ್ನೆರಡೊರುಷವಾಗಿ
ನಿಂದು ತೋರುತಲಿದೆ ನಿ.......ವಾಗಿದೆ
ಮುಂಗಾರಿನ ಕಾರ್ಮುಗಿಲು ಮಿಂಚಿನ ಸಿಡಿಲಂದದಿ ತೋರುವೆನು ೩

ಇದೆ ಉಗಹಾದಿಯು ಹದಿನೈದುದಿನದೊಳೆ
ಇದೆ ಶಿವಯೋಗದ ಹಬ್ಬವು ಬಂದಿದೆ ನೋಡು
ಮಂದಕರಿ ಬಸವುಗನೆಂಬುದೊಂದೆತ್ತಿ[ನ]ದೊಸವಂತವು
ಸದೆಬಡಿದೊಗೆದು ತುಳಿದು ಗಂಡಭೇರುಂಡ
ಬಗೆದ ಸೂತ್ರಿಕನು ತಳವಾರಿಕೆಗೊಟ್ಟು
ಕದುಬಿ ನಾ ಮಲತಿರ್ದವನನೆಬ್ಬಿಸಲು ರಾಯ
ಉದಯುವಾಯಿತು ಸೂರ್ಯನು ೪

ಸೂರ್ಯನುದಿಸೆ ಆತ್ಮನು ಸಾಹಸಮಲ್ಲ
ಸೂರ್ಯ ತುಕ...ವೇರಿ ಧಾರಿಣಿಯೆಲ್ಲ
ವೀರ ಕರಿಯುಬಸವಾರ್ಯ ಜಯುಯೆಂದು ಮೂರುಲೋಕಂಗಳೆಲ್ಲ ೫
.........

೧೦೫

ಹೇಳಿದೆನು ನಮ್ಮವರಿಗೆ ಕೇಳಿರೈ ॥ ಪಲ್ಲ ॥
ಕಾಳಬಸವುಗನು ನಾನುಯೆಂದು

ಬೆಳೆಯು ಕೆಂಪಾಯಿತೆಂದು ಹೇಳಿದೆನು
ಬಳಸಿ ಬ್ರಹ್ಮಾಂಡದೊಳಗೆ
ಇಳೆಗೆ ಅತಿಪೊಸತಾಗಿಹ ಗವುಡ ಕಂ ೧
ಬಳವ ಕೊಡುಂತಿಹನ ಬನ್ನಿಯೆಂದು

ನಾನವಗೆ ಜೀತಗಾರ ಗವುಡಗನು
ಮಾನವಿಲ್ಲದ ಬೆಳೆಯನು
ಬೆಳೆವ ಭೂವನಿತೆಯು ಗಂಡ ನಾನು
ಹೊಲೆಯನೆಂಬಾಯುಧವ ಪಿಡಿದು ಬನ್ನಿಯೆಂದು ೨

ಒಮ್ಮನದ ಕಂಬಳವನು ನಿಮಗಿತ್ತು
ಚೆನ್ನಾಗಿ ಸಲಹಿಕೊಂಬ ಗವುಡ
ಇನ್ನಿದಕೆ ತಪ್ಪದೆಂದು ಅಭಯವಿತ್ತ
ನಮ್ಮಂತ ರಾಮಗೌಡಯೆಂದು ೩

ಚೆನ್ನಡಣಾಯಕ ಗೌಡನು ಮಧ್ಯದಲಿ
ರಣರವಿಯು ಕಣನವಾಡಿ ನಿಂದು
ಭುವನಕತಿ ಪೊಸವೇಟಿಯನಿರಿಸಿದನು
ಅವನೀಶರು ಮಗವು ತಾಯೆಂದು ೪

ವೇಟ್ಟಿ ಕಂಡಂಗಲಪೂಜೆಯ ಮಾಡಿ ನಿಜ
ದಾಟಕ್ಕೆ ರಾಮಗೌಡ ನಿಂದು
ವಿಪಾಟಿಂಗುರಿಯು ನಯನನು ಹರಿಕಾತಿ
ದಾಟವ ನಾನೇನೆಂಬೆನೆಯೆಂದು ೫

ಕಣಕೋಲು ವೀಣೆ ಬಾರನು ಕಯ್ಯೊಳಗೆ
ಗಣನಾಥ ಪಿಡಿದುಕೊಂಡು ನಿಂದು
ಕಣಬಾರಿಗಳ ಹೊಡೆವುತ ನಿಂದ
ನಿರ್ಮಲ ಅಂತ ರಾಮಕೃಷ್ಣಯೆಂದು ೬

೧೧೩

ರಾಗ ॥ ವಡೆಧನ್ನಾಸಿ

ಶೀಲವಂತನೆಂಬ ಮಾಸಾಳು ಬಂದ
ಶೂಲದ ಹಬ್ಬ ವಸಂತಕೆ ॥ ಪಲ್ಲ ॥

ಭಕ್ತಿಯೆಂದೆಂಬ ಭಾವವ ತೊಟ್ಟು
ನಿಜನಿತ್ಯವೆಂದೆಂಬ ಶೀಲವನು ಕಟ್ಟಿ
ಚಿತ್ತಾಮಮ್ಮವದ ಕಾಯಕ ಪಿಡಿದು
ಬೆಳೆಯಿತ್ತು ಬ್ರಹ್ಮಾಂಡವನೊಳಕೊಂಡು ೧

ನಿರಾಹಾರುವೆಯೆನು ನಿರುತದ ಮುಸುಕಿಟ್ಟು
ಕಾವೇರಿ ಕಪಿನ ಶಿರದಲಿ...
. . . . . . . . . . . ಮೊಗದು ಹೊತ್ತು
ರಾಯಗಡುವ ಕರಿ ವೀರವ್ರತದ ಶೀಲವಂತನು ೨

ಒಂದು . . . ಮೊಲವೊಂದು ಮಡಕೆಯೆತ್ತಿ
ಒಂದರಿದೆಲ್ಲ ಪಾಕವನು ಮ . . . . .
. . . . . . . . ಹುವನೆಲ್ಲ
ತಿಂದು ಡಬ್ಬಿನೆ ತೇಗಿ ನಿಂದ ನಿಜದ ಶೀಲವಂತನು ೩

ಕಪ್ಪಿನ ನಂಜು ಕೆಂಪಾಯಿತು
ಕ್ರೂರಮನಂಜರ ಸುಟ್ಟುರುಹಲೆಂದು
ವೀರವಸಂತರಾಯನೆ ಪೊರೆಪೊರೆಯೆಂದು
ಕ್ರೂರಕರ್ಮವೆಂದು ವರವಿತ್ತು ೪

. . . . . . . . . . . , . . . . . . . .
. . . . . . . . . . . ಟಕಾಲ ಬಂದು
ಎಂಟುದಿಕ್ಕನೆ ಸುಟ್ಟ ಬಂಟತನವನು ಬಣ್ಣಿಸಲಳವೆ
ಕಂಟಿವೀರ ಕರೆಕಂತನಾಗಿ ವಿಷಕಂತನಾದ ನೀಲಕಂತನು ೫

೧೦೭

ರಾಗ ॥ ತೆಲುಗ ಕಾಂಬೋಧಿ

ಇದೆಕೊ ಬಂದಿದೆ ನೋಡಿಯಂದೆಕೊ ಬಂದಿದೆ ನೋಡಿ
ಮದಕರಿವಸವಂತನು
ಕದಳಿಯ ವನದೊಳು ಕಂಬದೊಳಗೆ ಕಟ್ಟಿದ
ಮದದಾನೆ ನಿಂದಿದೆಕೊ ೧

ಕದಳಿಯವನಗಳ ಕದುಬಿ ಮುರಿಯಲೆಂದು
ಮದವೇರಿ ನಿಂದಿದೆಕೊ
ಸದೆಬಡಿದೊಗೆದು ತುಳಿಯಲೆಂದು
ಕದಳಿಯವನಗಳನು ೨

ಸತ್ಯವೆಂದೆಂಬ ತಾಮಸದ ಸರಪಣಿಯು
ಮತ್ತಗಂಬದಲಿ ಕಟ್ಟಿ
ಕತ್ತರಿಸಿತು ತಾಮಸವೆಂಬ ಸರಪಣಿ
ಹೊಕ್ಕಿತು ಕದಳಿಯನು ೩

ಹೊಕ್ಕುತುಳಿದು ಕದಳಿಯುವನಗಳ ಮಹ
ಮಸ್ತಿಯ ಮದ್ದಾನೆಯು
ಲಕ್ಷಕೊಂದು ಕೋಟಿಗೊಂದು ಬಲ್ಮರಗಳನು
ಬಿಟ್ಟಿತು ಬನದೊಳಾಗ ೪

ಇಂತೀ ಮಹಾಘನಲೀಲೆಯೊಳಗೆ ಚೌ
ದಂತಿಯನೇರಿಕೊಂಡು
ಅಂತರಾತ್ಮಕನೆ ವಸಂತ ಜಯ ಜಯ
[ವಂತೆನುತ] ಲೋಕಂಗಳೆಲ್ಲ ೫

## ೧೦೮

ರಾಗ ॥ ಸೌರಾಷ್ಟ್ರಕ

ಚಂದವಾಯಿತು ಚಂದ್ರಸೂರ್ಯನಾದನು
. . . . ನೋಡಿ ಚಂದಮಾಮ
ಜಾಣ ನಿಂದನು ನಿಜದಾನಂದ....
. . . . . ಳಗಿಲಿ ಚಂದಮಾಮ ॥ ಪಲ್ಲ ॥

ವಿಷ್ಣುಮತಕೆ ವೀರಕೃಷ್ಣನಾಗಿ ಬಂದ ಚಂದಮಾಮ
ಆ ಮಹಾವಿಷ್ಣುವೆ ವೀರವಸವಂತನಾದನು ಚಂದಮಾಮ
ವಿಷ . . . ರಾಮ ವಸಂತನು ಚಂದಮಾಮ
ರಾಮಕೃಷ್ಣನೆ ಗುರು ಸಿದ್ಧಬಸವರಾಜ ಚಂದಮಾಮ ೧

ಲಿಂಗಲಿಂಗವೆಂಬ ಲಿಂಗವಂಚಕರಿಗೆ ಚಂದಮಾಮ
ಅಂಗವೆ ತನ್ನ ನಂಜಾಗಿ ತೋರಿದ ಚಂದಮಾಮ
ಲಿಂಗ ಅಂಗವೆಂಬ ಭಂಗ ಭವಿಗಳಿಗೆ ಚಂದಮಾಮ
ನಾರಸಿಂಗನಾಗಿ ತನ್ನ ಮರಸಿ ತೋರಿದ ಚಂದಮಾಮ ೨

ಇಂತೀರ್ವರೊಳಗಾರು ದರುಶನವಡಗಿತು ಚಂದಮಾಮ
. . . ವೀರವೈಷ್ಣವವಂತದಿ ನಿಂದ ಚಂದಮಾಮ
ಪಂಥಕಟ್ಟರ ಅ . . ನಾರಿಯದಾರು ಚಂದಮಾಮ
ನಮ್ಮ ಕಂತುಕಾಲನ ಕೊಲೆಗೇಡಾದರು ನೋಡಿ ಚಂದಮಾಮ ೩

## ೧೦೯

ರಾಗ ॥ ಶಂಕರಾಭರಣ

ಸಂಗದಿಂದ ಜೀವನಹೆನು
ಸಂಗದಿಂದ ಪರಮನಹೆನು
ಸಂಗದಿಂದ ಆತ್ಮಲಿಂಗ ಸಂಗವಾದ ಶರಣನು

ಸಂಗದಿಂದ ಸೂಳೆವೆಣ್ಣು
ಸಂಗದಿಂದ ಬೋಳನಾಗಿ
ಸಂಗದಿಂದ ಸಕಲ ಹೊಲೆಗುಣಂಗಳನ್ನು ತುಳಿದಳು ೧

ಸಂಗದಿಂದ ಮಣ್ಣು ಚಿನ್ನ
ಸಂಗದಿಂದ ಹೆಣ್ಣು ಗಂಡು
ಸಂಗದಿಂದ ಪುಷ್ಪನಂಜಿ ಸಂಗವಾದ ಲಿಂಗವು ೨

ಸಂಗದಿಂದ ಸೂಕರನ್ನು
ಸಂಗದಿಂದ ಮಂದಕರಿಯು
ಸಂಗದಿಂದ ಭೂಚರನು ಖೇಚರದೊಳಗಾಡುವ ೩

ಸಂಗದಿಂದ ಲಕ್ಷಕೊಬ್ಬ
ಕೋಟಿಗೊಬ್ಬರುಗಳ ಮಾಡಿ
ಸಂಗದಿಂದ ಚಿನ್ನವರದ ಲಿಂಗವಾದ ಪರಮನು ೪

ಸಂಗದಿಂದ ನರಸಪುರದ
ರಂಗಗಭಯಮಿತ್ತು ಆತ್ಮ
ಲಿಂಗ ವೀರವಸವಂತ ರಂಗಮಧ್ಯದಲ್ಲಿ ನಿಂದ ೫

ಇಂತಿ ಸುಕೃತಗಳನು ಕೂಡಿ
ಅಂತ ರಾಮದೇವರಾಯ
ಮಂತ ಹೂಡಿ ತಡೆದುದಯೆಂತು ನಾನು ಪೊಗಳುವೆ ೬

ಆತ್ಮನಿಂದ ಆತ್ಮನರಿದು
ಆತ್ಮ ಕರಿಯಾತ್ಮನಾಗಿ
ಆತ್ಮ ಭಕ್ತ ಅಂತರಾತ್ಮ ಆತ್ಮನೆ ವಸಂತನು ೭

ಆತ್ಮ ಅಂತರಾತ್ಮನೆಂದು
ಆತ್ಮ ಪರಮಾತ್ಮನೆಂದು
ಆತ್ಮ ಕರಿಯಾತ್ಮನೆಂದು ಅಷ್ಟದಿಕ್ಕು ಪೊಗಳಿತು ೮

ಜಯತು ಸಿದ್ಧ ಬಸವನೆಂದು
ಜಯತು ಸಿದ್ಧರಾಮನೆಂದು
ಜಯತು ಚಿಕ್ಕಸಿದ್ಧನೆಂದು ಜಯತು ಕರ್ಮನಿರ್ಮಲ ೯

೧೧೦

ರಾಗ ॥ ಆಹರಿ

ನಾರಸಿಂಹ ಪುರ ನಾಮವಳಿದು ಪೆಸರು
ವೀರವಸವಂತ ಕರಿರಾಯಪಟ್ಟಣವು ॥ ಪಲ್ಲ ॥

ಇಲ್ಲಿಗರಸಾಗಿಪ್ಪ ಮಂತ್ರಿ ಪ್ರಧಾನರಿಗೆ
ಮಲ್ಲಿನಾಥನ ತೋರಿ ಮನ್ನಿಸಿ
ಊಳಿಗವಿತ್ತು ಕಣ್ಣಪುರವಿದೆಂದೆನಿಸಿ
ಭಲರೆಯೆಲ್ಲರಿಗೆ ಕರುಣದಿಂ ಕೃಪೆಯನಿತ್ತಭವ ೧

ಎಣ್ಣೆ ಕಾವೇರಿ ಮಧ್ಯದಲಿ ಕರಿಯಾತ್ಮನಂ
ಚೆನ್ನಪಟ್ಟಣವೆನಿಸಬೇಕೆಂದು ಕರಿರಾಯ
ಕನ್ನಡಕ ಕಂಬಮಂ ನಟ್ಟು ಭಲರೆ
ಚೆನ್ನಿಗನು ಗುರುಕರಿಯ ಬಸವರಾಜೇಂದ್ರ ೨

ವೀರವಸವಂತರಾಯನಿಗೆ ಬಲಭುಜದಂಡ
ಕಾರಣೀಕನು ಕರಿಯಬಸವ ವಸವಂತನನು
ಊಳಿಗದ ಹಡಪದವ ನಾನು ನಿಂದು
ಕಾವೇರಿಕಡಲೊಳಗೆ ತೋರಿಹೆನು ಬಲವ ೩

ಅಪ್ಪ ಅವಧಾನ ಎಚ್ಚರಿಕೆ ಎಲ್ಲರು ಕೇಳಿ
ಸೃಷ್ಟಿಗವ ತಿಮ್ಮರಾಯನಕುವರ ಕರಿಬಸವ
ಭ್ರಷ್ಟಜೀವಿಗಳೆಲ್ಲ ಕೇಳಿ ಭಲರೆ
ಕಟ್ಟಕಡೆಯೆಂದು ಕರಿಬಸವ ನಟ್ಟಪರಿಯ ೪

ತೊಲಗಬಾರದು ವೀರವಸವಂತನಾಳೆಂದು
ತೊಲಗಬಾರದು ಛತ್ರಿ ಅರಸುಕುಮಾರನಂ
ತೊಲಗಬಾರದು ಕಂಬವೆಂದು
ನಟ್ಟು ಕಲಿಯುಗದ ಗಂಡ ಕರಿಬಸವರಾಜೇಂದ್ರ ೫

೧೧೧

ಚೌಪದ

ರಾಯ ರಾಹುತರಾಯ ರಾಮನೆಂದೆನಿಸಿ
ಕಾಮಿನಿಯರುಗಳ ತನ್ನಂಗದೊಳಿರಿಸಿ
ಕಾಮನನು ದಹಿಸಿ ನಿಷ್ಕಾಮಿಯೆಂದೆನಿಸಿ
ಈ ಭೂಮಿಯೊಳಿಹ ಸೂಳೆಯರಿಗೆ ವಿಟನೆನಿಸಿ ೧

ಅಂದು ಕಾಶಿಯೊಳು ವೇದವ್ಯಾಸಮುನಿಯು
ಬಂದು ಜನಗಳ ಕೂಡಿನಿಂದು ಸಭೆಯೊಳಗೆ
ಅಂದು ಕೇಶವನು ಘನವೆಂದು ಕೈಯೆತ್ತೆ
ನಂದೀಶ್ವರ ಬಂದು ಕಡಿದ ಕರವಿದೆಕೊ ೨

ಕಲಿಯುಗವ ಕಡಿದು ಕಾಲನ ಕಾಲಲೊದೆದು
ಕರಿಭಕ್ತನೆನಿಸಿ ಕಾಯವ ತೋರಿಗೆಲಿದು
ಕಲಿಯುಗದ ಕಡೆಯು ಕುಂಭದಿ ಬಂದು ನಿಂದು
ಕದನವಿಕ್ಕಿದ ನಾಲ್ಕುದಿಕ್ಕಿನೊಳಗಿಂದು ೩

ಕಾಯದೊಳು ಗುರು ಲಿಂಗ ಜಂಗಮದ ತಿಂಥಿಣಿಯು
ದೇವ ನಿಜಕರಪೀಠಮಧ್ಯದೊಳು ನಿಂದು
ವಿಷ್ಟಪ್ರಾಣಭಾವದೊಳಗೆ ತಾ ನೆಲೆಸಿ
ಕಷ್ಟವನು ಮಾಡಿಯು ಜಗಕೆ ಕರ್ತನೆಂದೆನಿಸಿ ೪

ಜಯ ಜಯತು ಬಸವಯ್ಯ ಜಯತು ಷಣ್ಮುಖನೆ
ಜಯತು ಅಪ್ರತಿಮ ಅನಾದಿಜಂಗಮವೆ
ಜಯತು ಜಗವನು ಪಾವನವ ಮಾಡುವನೆ
ಜಯಜಯತು ಭಕ್ತರಿಗೆ ಮುಕ್ತಿಮುಸದೀಶ ೫

ಹಬ್ಬಕೌತಣವೆಂದು ಹೇಳಿದೆನು ಬಂದು
ಒಬ್ಬನೆ ವಸವಂತರಾಯ ದೊರೆಯೆಂದು
ಕೊಬ್ಬಿದವರನೆಲ್ಲ ಕೋಲಲ್ಲಿ ಕೊಂದು
ಅರ್ಬುತವಾಯಿತು ಬ್ರಹ್ಮಾಂಡದೊಳಗಂದು ೬

## ೧೧೨

ರಾಗ ॥ ಶಂಕರಾಭರಣ

ತನುವೆಂಬ ಮನೆಯೊಳಗೆ ಘನಲಿಂಗವವಧರಿಸಿ
ನೆನಹಿನ ನೇಮದೊಳಾಡುವ ನಂಜಿಯ
ಘನವಕಾಂಬವರಿಗರಿದು ಘನಲಿಂಗ ಕರಿಬಸವ
ಚಿನುಮಯ ನಂಜಿಯ ಕೂಡಿ ೧

ನೆನಹಿನ ನೇಮದೊಳಾಡುವ ನಂಜಿಯ
ಘನವ ಕಾಂಬವರಿಗರಿದು ವಿಸ್ತರಿಸುವರಳವಲ್ಲ
ಭುವಿವಚನವೆಂದು ಕೊಂಡಾಡಲಳವಲ್ಲ
ನೀನಹುದುಯೆಂದು ಜಯ ಚಾಂಗುಭಲರೆ ಕೂಡಲಳವಲ್ಲ ೨

ಇನಿತೀರ . . . ಣ್ಯದ ಸಟೆನಿನಗೆ
ಮಹಾ ಪರಿಪರಿಸಿಕೆಯು ವಿರಚಿಸಿ ತಂದ
ಒಡವಾಗಿ ಕರಕೊಂಡು ಬಸವ
. . . ಟು ನಡದಾಡು ಬೇಡ ೩

ನಿನ್ನನೊಲಿಯೆಂದ . . .
ಉತ್ತರದೇಶದ ಸತಿ ಮಹಾರತ್ನ ತೆತ್ತಿಸಿದ
ಒಡವೆಯು ಕೊಂಡುಬಂದ . . . ಕರತಂದ
ತೊಟ್ಟುವು ಪೇರಣೆಯು ತಂದುವಾನಂದ ೪

೧೧೩

ಚೌಪದ

ಹನ್ನೆರಡುವರುಷ ತುಂಬಿದುದೆ ನವಮಾಸ
ಇನ್ನೊಂದುತಿಂಗಳು ಕಡಿಮೆ ದಿನವಾಸ
ಮುನ್ನ ನಾ ಮಾಡಿ ಕೂಡಿದನು ಕರ್ತಿಗಳಿಗೆ
ಚೆನ್ನಾಗಿ ತೋರುವೆನು ಚೌತಿ ಪೂಜೆಯನು ೧

ಬ್ರಹ್ಮ ಮೊದಲು ಪರಮಾತ್ಮನೆಂದೆನಿಸಿ
ಧಾರಿಣಿಯು ನರಕಿಗಳ ಕರವೆತ್ತಿ ಮುಗಿಸಿ
ತೋರುವೆನು ಬಲವ ಮಂತ್ರಿದಕೆ ಮಿಗಿಲೆನಿಸಿ
ವೀರವಸಂತನನು ಊಳಿಗವಿದೆನಿಸಿ ೨

ಇಲ್ಲಿಂದ ಇತ್ತ ವಿಷವಾಕಮೃತವಾಕು
ಅಲ್ಲವೆಂದಡೆ ಅಲ್ಲ ಆಹುದೆಂದಡಹುದು
ಕಲ್ಯಾಣಪುರದ ಕರಿಮಲ್ಲಿಕಾರ್ಜುನನು
ನಿಲ್ಲದೆಚ್ಚನು ಗುರಿಯು ನಿಜದ ಲೀಲೆಯುಲಿ ೩

ಗುರಿಯು ಮತ್ತಾವುದೆಂದಿರಬೇಡ ನೀನು
ಪರಮು ಪರಮಾತ್ಮ ಗುರು ಕರಿಯುಬಸವ್ವಗನು
ಹರುಷದಿಂ ತನ್ನ ಲೀಲಾವಿನೋದದಲಿ
ಗುರಿಯನೊಡ್ಡಿದ ಬರಡು ಹಯುನಾಯಿತೆಂದು ೪

೧೧೪

ರಾಗ ॥ ತೆಲುಗು ಕಾಂಬೋದಿ

ಆತ್ಮ ನೀನೆ ನೀನಾಗಿದ್ದು ನೀನೆ ಸೂಕರನಾಗಿ
ನೀನೆ ನರಕವ ಬಯಸಿ

ಆತ್ಮ ಆತ್ಮಾ ನೀನಲ್ಲದನ್ಯವಿಲ್ಲೆಂದು ಸತಿಯಳ
ಮರದಾದೆನು ಕರುಣ ಕಳುಹಿದಾತ್ಮ ೧

ಆತ್ಮ ನೀನೆ ನೀನೆಂದೆಂಬ ಅರುವೆಯನು
ಉಟ್ಟವಳು ನೀನೆ ಸಕಲಾಭರಣವೆಂದು
ಆತ್ಮ ನೀನೆ ಲಿಂಗಾರ್ಪಿತವುಯೆಂದು
ಸುಖಿಯಾಗಿಹಳ ಏನು ಕಾರಣ ಮರೆದೆ ಆತ್ಮ ೨

ಆತ್ಮ ಮಂದಕರಿಯನೇರಿ ಸೂಕರನ ಬಯಸಿದರುಂಟೆ
ಅಧಮಂತನವೇಕೆ ಹೇಳಾತ್ಮ
ಆತ್ಮಮದನ ಮನ್ಮಥ ಕರಿಯ ಬಸವನರಸಿಯ ಮರೆದು
ಮಣ್ಣ ಬಯಸುವರೆ ಪರಮಾತ್ಮ ೩

ಆತ್ಮ ಸಿಂಹಮನ್ನೇರಿ ಶ್ರೀ ಕೃಷ್ಣನೀನಾಗಿರ್ದು
ಕುನ್ನಿಯನು ಬಯಸುವರೆ ಆತ್ಮ
ಆತ್ಮ ಚೆನ್ನಿಗನು ಗುರು ಕರಿಯ ಬಸವನರಸಿಯ
ಮರೆದು ಮಣ್ಣ ಬಯಸುವರೆ ಪರಮಾತ್ಮ ೪

ಆತ್ಮ ನಂಜಿ ನಂಜಾಗಿರ್ದು ಗಂಜಳವ ಬಯಸುವರೆ
ನಂಜುಂಡಲಿಂಗ ಪರಮಾತ್ಮ
ಆತ್ಮ ನಂಜಿಯನು ಮರೆದು ಕರ್ಮದ ಪುಂಜವನೆ
ಬಯಸಿದಂದವ ನೀ ಹೇಳು ಪರಮಾತ್ಮ ೫

ಆತ್ಮ ಮುಪ್ಪಿಯನು ಮರದು ನೀ ತಿಪ್ಪೆಯನು ಬಯಸುವದು
ಅಚ್ಚರಿ ಇದೇನು ಹೇಳಾತ್ಮ
ಆತ್ಮ ಕಸ್ತೂರಿಯ ಪೂಸಿ ಕತ್ತೆಯ ಲದ್ದಿಯನೆ
ಕಯ್ಯೊಳೆತ್ತಿ ತೋರುವನು ಪರಮಾತ್ಮ ೬

ಆತ್ಮ ಹೇಳಯ್ಯ ಪರಮಾತ್ಮ ಕೇಳಿಹೆನು
ಪರಮಾತ್ಮ ಹೇಳಿ ಕೇಳಿಹೆನು ಪರಮಾತ್ಮ
ಆತ್ಮ ಕೊಳುಂಡ ಹಾಳೆಯನು ಬಿಟ್ಟು ಅರಸುವ
ಪರಿಯ ಹೇಳಯ್ಯ ರಾಯ ಕರಿಯಾತ್ಮ ೭

ಆತ್ಮ ನಿನ್ನಸತಿ ಪತಿವ್ರತೆಯು ಪುಷ್ಪಾಂಜನೆಯ
ಕಯ್ಯ ಅನ್ನವನು ಉಂಡು ತಾನಿರಲು

ಆತ್ಮ ಬಣ್ಣಸರಗಟ್ಟಿ...ಭವಹರಿದು
ಮೊಳೆ ತನ್ನ ನಿನ್ನಾಣೆ ಹೋಯಿತೆಲೆ ಆತ್ಮ ೮

ಆತ್ಮಲಿಂಗವೆಂದೆಂಬ ಕತ್ತರಿಯೊಳಗೆ
ಕರ್ಮವಿದೆಂಬ ಕತ್ತಲೆಯ ಸಂಹರಿಸಿ
ಆತ್ಮಲಿಂಗವನು ತೋರಿ ಸೂಕರಗೆ
ಮಂದಕರಿ ದೀಕ್ಷೆ ನಿಂದಿತ್ತ ನೋಡು ಪರಮಾತ್ಮ ೯

ಆತ್ಮಯಿಂದು ಚಂದ್ರನು ಸೋಮಸೂರ್ಯನಾದನು
ಭಲರೆ ಮಂದಮತಿಗಳನು ಸುಟ್ಟುರುಹಿ
ಆತ್ಮಬಿಂದುವೆಂದೆಂಬ ಮಳೆಗರೆದು
ಬ್ರಹ್ಮಾಂಡದೊಳು ನಿಂದು ಸೂಸಿತು ಜೀವರಾತ್ಮ ೧೦

## ೧೧೫

ರಾಗ ॥ ಮಧುಮಾಧವಿ

ಸೂಳೆತನ ಬೇಡಾತ್ಮಲಿಂಗಿ ನರರ
ಬಾಳು ದೊಡ್ಡಿತುಯೆಂದು ಉಪಚರಿಸುವಂಥ ॥ ಪಲ್ಲ ॥

ಮಿಂಡಗಾರರು ನರರು ನಿನಗೆ ಭಲರೆ
ಮುಂದಲೆಯನಿತ್ತು ನೀ ಕಂಡಕಂಡವಗೆ
ಲಂಡ ನೀನಹಂದಾತ್ಮಲಿಂಗಿ ಚಿಕ್ಕಂದು ಕೂಡಿದಳು
ಸೂಳೆಯೆಂದು ಸ್ಮರಿಸಿದೆ ಸೂಳೆತನ ಬೇಡಾತ್ಮಲಿಂಗಿ ೧

ಅಗ್ನಿಸೋಂಕಿದ ತಿಪ್ಪೆಯಂತೆಯೆಂಬ
ಅಗ್ಗಳಿಕೆ ನಿನಗೆ ಸಲ್ಲದು ಅಂತರಾತ್ಮ
ಅದ್ವೈತ ನಿನಗೇಕೆ ಹೇಳು ನರಕಿ
ವೃದ್ಧಸೂಳೆಯರುಗಳು ಬಡಬಡಿಸುವಂಥ ೨

ಮಿಂಡಗಾರರಿಗಳುಕಿ ಸೂಳೆವಾಳಿಯೆಂಬ
ನಾಣ್ಣುಡಿವುಂಟು ಕಂಡು ನಾ ಬಲ್ಲೆ
ಚಂಡಿಕಾಂಬಿಕೆಯು ನೀ ಕೇಳು ಉದ್ದಂಡ
ನಾಯಕನೆಂಬ ಬಿರಿದು ನನಗುಂಟು ೩

ಶಬ್ದಸೂತಕಕಳಿಕಿ ನೀನು ಬಾಳ
ದೊಡ್ಡ ಸೂಳೆಯರುಗಳು ಕೊಂಡಾಡಿ ತೆಗೆವ

ಬುದ್ಧಿವಂತಿಕೆ ಸೂಳೆತನವ ಬಿಟ್ಟು ನೀ
ಶುದ್ಧ್ಯಸಿ ನೀ ಸಿದ್ಧ ನಂಜಿಯಾಗಿಹುದು ೪

೧೧೬

ರಾಗ ॥ ತೆಲುಗ ಕಾಂಬೋದಿ

ಈಕೆಯುಪ್ರತಿಮ ಪಾರ್ವತಿ ಗಂಗೆ ಗೌರಿಯು
ಲೋಕನಾಯಕಿ ಪುಟ್ಟಿಯು
ಪಾಪ ಹರವುದು ನನ್ನವರು ನೋಡಿರೋ ನೀವು
ಆ ಪರಾತ್ಪರಶಕ್ತಿಯು ॥ ಪಲ್ಲ ॥

ಅಂದು ಕೌಶಿಕ ಭವಿಯೆಂದು ಕೌಪವಕಟ್ಟಿ
ಬಂದುಮಂದಿರವ ಪೊಕ್ಕು ಗಂಡನು ಚೆನ್ನಮಲ್ಲ
ನೆಂದು ನಿರ್ಮಲವಾದ ನಿಂದ ಮಹಾದೇವಿಯು
ಬಂದು ಹೇರೂರಲ್ಲಿ ಮಲ್ಲಿನಾಥನುಯೆಂಬ
ತಂದೆ ಉದರರದಿಪುಟ್ಟಿ ನಿಂದಕ ಜೈನರ
ಕೊಂದುಮರ್ದಿಸಿ ಹೆಣ್ಣು ಗಂಡಾದ ಪುಟ್ಟಿ ನೋಡಿ ೧

ಮುಪ್ಪುರವನು ಸುಟ್ಟು ಕಪ್ಪುಕಂಜದ ಪರಾಶಕ್ತಿಯು
ತಾನಿರಲು ಆರ್ತಿಯಿಂದಲಿ ಮರ್ತ್ಯದೊಳಗೆ
ಹಾದರವು ಹೇಗಿಪ್ಪುದು ಹೇಳೆಂದಳು
ನಿತ್ಯನಿರಂಜನ ನಿರ್ಮಲ ನಿರುಪಮ ಚಿಪ್ಪಿಗನಾಗಿಬಂದು
ವಸ್ತ್ರವಹೊಲಿದು ಮೆಚ್ಚಿಸಿಕೊಂಡು ಕೊಡಿದ
ಎಕ್ಕನಾತಿಯು ಪುಟ್ಟಿಯು ೨

ಶರಣಸಂಕುಲ ಸರ್ವಭೂಮಿಪತಿಯು ನಂಬಿ
ತಿರುವಾಳೂರೊಳಗೆ [ನೃಪ]ನು ಪಟ್ಟವಕಟ್ಟಿ
ವಿವಹಸಮಯದೊಳು ಪರಮ ಅತೀತ ಬಂದು
ಕರುಣದಿಂ ತನ್ನ ಹೊಲೆಯರ ಹೊಲೆಯನೆಂದು
ಕರೆದು ಪೊದಾಳವಿತ್ತ
ಪರಮಾತ್ಮನೊಳು ಕುಂಟಣಿಯು ನಡೆಸಿಕೊಂಡ
ಪರವೆನಾಚಿಯು ಪುಟ್ಟಿಯು ೩

ಅಕಳಂಕಲಿಂಗವು ಮಕರಾಂಕಕುಂಡಲವಿಟ್ಟು
ವಿಪರೀತ ಕೃಷ್ಣನಾಗಿ ಚ್ಚಕಿತಾಮಭಿದತೆಯೆಂಬ

ತಾಳಗಳಿಂದ ನಃಕ ಜೇಂ ತಕಿಕಿಣಾಯೆನುತ
ಭಕ್ತವತ್ಸಲನಾಗಿ ಹೃತ್ಕಮಲದಿ ನಿಂದು ನಟಣೆಯಿಂ ತಾಂಡವಾಡಿ
ಭಕ್ತನು ಬಾಲಕೃಷ್ಣನು ಮುದ್ದುಕೃಷ್ಣನು ಕುಮಾರಿಣೆ ಪುಷ್ಪಿನೋಡಿ ೪

ಇವಳು ಕರಿಯುಮಾರಿ ಚವುಡಿ ಚಾಮುಂಡಿಯು
ಇವಳು ಚಂಡಿಕದೇವಿಯು
ಇವಳೀಗ ಕರ್ಮವ ತುಳಿದು ಹೊಸೆವ ದುರ್ಗಿಣಿ
ಇವಳು ಮಹಂಕಾಳಿಯು
ಇವಳೀಗ ಭುವನವಾರು ಮಂಡಲವನು ಮಾಡಿ
ರವಿಶಶಿಗಳು ನಡುಗೆ
ಇವಳೀಗ ವೀರಕರಿಯುಬಸವರಾಜನ
ರಾಣಿ ಅರಸಿ ಪುಷ್ಪಾಂಬಿಕೆಯು ೫

೧೧೭

ಸೊಬಗಿನ ಸೋನೆವರ್ಣ

ಹಾಡಿ ಕೊಂಡಾಡಿ ಮುಂಡಾಡಿ ವಂದ್ದಿಸಿ ನೀವು
ನೋಡಿ ಪುಷ್ಪಿಯ ಪಾದಕಮಲವ ॥ ಪಲ್ಲ ॥

ಪರಶಿವನು ಪೆತ್ತ ಪರಮಶೀಲೆ ಲೀಲೆ
ಪರಕೆ ಪರವಾಗಿಹ ಪರವೆಯು
ಅರಿಯುವು ನರಗುರಿಗಳು ನಮ್ಮ ಪುಷ್ಪಿಯು
ಪರಮ ಪತಿವ್ರತದೊಳೋಲಾಡುವಳು ೧

ನಿಜಭಕ್ತಿ ನಿಜಮುಕ್ತಿ ನಿಜಶಕ್ತಿ ಪುಷ್ಪಮ್ಮ
ನಿಜವ ತೋರುವದು ನಿನ್ನವರಿಗೆ
ಗಜಬಜನೆಯು ಸುಟ್ಟ ತ್ರಿಜಗಪತಿಯೆಂಬುವನು
ತ್ರಿಜಗಕ್ಕೆ ತೋರು ತ್ರಿಲಿಂಗವನು ೨

ಇವನೀಗ ಕೂಡಲಸಂಗನ ಬಸವಯ್ಯ
ಇವನೀಗ ಚೆನ್ನಬಸವರಾಜ
ಇವನೀಗ ಮದಕರಿ ಬಸವರಾಜನು ನೋಡಿ
ಇವನೀಗ ಭುವನಕಪ್ರತಿಮನು ೩

ಇಂತೀ ಮಹಾಪರಬ್ರಹ್ಮವೆ ರೂಪಾದ
ಅಂತರಾತ್ಮಕನು ನಿಶ್ಚಿಂತನು
ಪಂಥವ ಮುರಿದು ಪಾಪವನು ಮರ್ದಿಸಿ ನಿಂದು
ಭ್ರಾಂತು ಬ್ರಹ್ಮವ ಬೀರಿ ಕಣಿಸಿದನು ೪

ಷಡುದರುಶನ ಹದಿನೆಂಟು ಸಮಯಗಳು
ಒಡನೆ ಕೂಡುಂಡೆಲ್ಲ ಒರಲಿತು
ಕಡಿ ಕಡಿ ಕೈಕಾಲ ಕಡಿ ಕಡಿ ಕಂಡವ
ಕಡಿದು ಬಿಸಾಡುವ ರಣಮಯಲೀಲೆ ೫

೧೧೮

ರಾಗ ॥ ಘಂಟಾರಾಗ

ಉಬ್ಬಸವಾಗಿದೆ ಹೆಣ್ಣೆ ಕೊಬ್ಬಿದ ಕುರಿಕೋಣನ
ಹಬ್ಬಕವೃತಣವನು ಮಾಡಿ ಉಣಬಡಿಸಿ ॥ ಪಲ್ಲ ॥

ನೀನೆ ಪತಿವ್ರತೆ ಹೆಣ್ಣೆನಿ . . . ತಾಮೃತವಾಕು
ಭಾನುಕೋಟಿ ಲಿಂಗದಲ್ಲಿ ಸ್ವಾನುಭಾವದರಿವ
ಭುವನಕ್ಕೆ ಬೇರು ಕಂಡ ಭಾವೆ ಭವಹಾನಿ ಹೆಣ್ಣೆ
ಮಾನಿನಿಯರ ಕುಲತಿಲಕ ಚಿಂತಾಮಣಿಯೆ ೧

ಹಸು ತೃಷೆ ವಿಷಯವು ವ್ಯಸನ ಪಂಚೇಂದ್ರಿಗಳು
ಅಸಮಾಕ್ಷಲಿಂಗದಲ್ಲಿ ವಿಶೇಷವಾಗಿದೆಕೊ
ಬಸವನರಸಿ ಕೇಳು ಕಸಗಳೆಯು ಬಂದುದ
ಹೊಸ ಬಗೆಯು ನೀ ತೋರೆ ಹೊಸದುರ್ಗಿಯೆನ್ನಾಣೆ ೨

ಆತ್ಮಶಕ್ತಿ ಪ್ರಾಣಲಿಂಗಿ ನೇತ್ರ ನೆನೆಯುವೆಂಬ ತ್ರಿಪುಟಿಯು
ಮೂರಿನಿಂದ ತ್ರಿಣೆಯು ನಾಯಕಿಯೆ
ಬೇಸರವಾಗಿದೆ ಹೆಣ್ಣೆ ಸೂತ್ರಧಾರಿ ನಿಜಶಕ್ತಿ
ಪಾತ್ರವನಾಡಿಸೆ ಜಗವ ಏಕಮುಖಿ ಪುಷ್ಪಿಯೆ ೩

೧೧೯

ತ್ರಿವಿಧಿ

ಕಲ್ಯಾಣದೊಳಗಿರುವ ಎಲ್ಲ ಗಣಂಗಳಿಗೆ
ವಲ್ಲಭೆಯಾಗಿ ನೀನಿದ್ದ ಕಾರಣವು
ಅಲ್ಲಮನಾದೆ ಕೃಪೆಯಿಂದ ೧

ಅಂದು ಕಲ್ಯಾಣದಲಿ ನಿಂದ ಬಸವನ ರಾಣಿ
ಇಂದುಮುಖಿ ಪುಷ್ಪಿ ನೀ ಬಂದ ವಸಗೆಯು
ಚಂದವನೊಲಿದು ಕೃಪೆಯಾಗು ೨

ಭಕ್ತಿ ನೀಲಾಂಬಿಕೆಯು ಮುಕ್ತಿ ಪುಷ್ಪಾಂಬಿಕೆಯು
ನಿತ್ಯದ ನೆಲೆಯು ನಂಜಾಂಬಿಕೆ ನೀನಾದ
ವಿಸ್ಮಯವವೊಲಿದು ಕೃಪೆಯಾಗು ೩

ಲೋಕಾದಿಲೋಕವ ಏಕವ ಮಾಡುವಳೆ
ಏಕಮುಖಿ ಪುಷ್ಪಿನಿ ಬಂದ ಒಸಗೆಯು
ಸೂಕರಿಗೆ ಒಲಿದು ಕೃಪೆಯಾಗು ೪

ಕೃಪೆಯಿಂದ ಸೂಕರಿಯು ಪ್ರಕೃತಿಯು ನೆಗ್ಗೊತ್ತಿ
ಕಪಟ ನಾಟಕಿಯು ಪುಷ್ಪಮ್ಮ ನೀನಿಂದು
ನಿಟಿಲದ ನಯನೆ ಕೃಪೆಯಾಗು ೫

ಹಮ್ಮಿನ ಸೂಕರಿಯು ಹೆಮ್ಮೆಯು ನೆಗ್ಗೊತ್ತಿ
ಧರ್ಮವ ತೋರಿ ನಿಜಮುಕ್ತಿ ಪುಷ್ಪಮ್ಮ
ಗಮ್ಮನೆ ಒಲಿದು ಕೃಪೆಯಾಗು ೬

ಮನ ಕಸಮುಸುರೆಯು ತೆಗೆದ ವನಿತೆ ನೀನಾಗಿರ್ದು
ಮನೆಯು ಕಸ ಹೆಚ್ಚಿಹರದರೆ ಪುಷ್ಪಮ್ಮ
ನಿನಗೆ ಹೀನಾಯು ಕೃಪೆಯಾಗು ೭

ನಿನ್ನ ಕೊಂಡಾಡುವರೆ ಇನ್ನಾರಿಗಳವಲ್ಲ
ಎನ್ನ ನಿಜಶಕ್ತಿರೂಪಾದ ಪುಷ್ಪಮ್ಮ
ನನ್ನಾಣೆ ಒಲಿದು ಕೃಪೆಯಾಗು ೮

ನನ್ನ ಪುಟ್ಟಿದವರು ನನ್ನುದ್ಧಯೆನಿಸಿಹುದು
ನಿನ್ನ ಪಾದದ ಕಮಲ ಸೇವೆಯೊಳಿರುತಿಹರ
ನಿನ್ನ ನಿಜವಿತ್ತು ಸಲಹುವದು ೯

ನಿನ್ನಿಂದ ಸೂಕರಿಯು ನಿನ್ನಿಂದ ಮುದಕರಿಯು
ನಿನ್ನಿಂದ ಕರ್ಮನಿರ್ಮಲವಾಗುವದು
ನಿನ್ನ ನೀನಿತ್ತು ಸಲಹುವದು ೧೦

೧೨೦

ರಾಗ॥ ತೆಲುಗ ಕಾಂಬೋದಿ

ಆತ್ಮಲಿಂಗವೆ ನನ್ನಿನ್ನೆಂತೊ ಕರಿ
ಯಾತ್ಮನೆಂದೆನಿಸುವ ನಿಮಿಷವಿನ್ನೆಂತೊ ॥ ಪಲ್ಲ ॥

ಒಂದು ಗಳಿಗೆ ಒಂದು ಯುಗವು ಮತ್ತೆ
ಒಂದು ದಿನವು ಒಂದು ಶತಯುಗವಾಗಿ
ಒಂದು ತಿಂಗಳು ಲಕ್ಷಯುಗವು ಆಗಿ
ಬಂಧನದೊಳಗೆ ನಾನಿರುವದಿನ್ನೆಂತೋ ೧

ಹನ್ನೆರಡೊರುಷ ಸೇವೆಯನು ಮಾಡಿ
ಕುನ್ನಿಮಶಾನವರಂತೆ ಬಗುಳಿದೆ ಬರಿದೆ
ನಿನ್ನಸೇವೆಯು ನಾರಿ ಕಂಡ ರಾಯ
ಚೆನ್ನಿಗ ಅಂತರಾತ್ಮಲಿಂಗ ಸಂಗ ೨

ನನ್ನ ನೀ ಮಣ್ಣು ಮಸಿಯನು ಮಾಡಿ
ಮಣ್ಣುಮಾನವರಂತೆ ಕೊಲ್ಲದಿರ್ದಡೆ ನೀ
ತಿನ್ನುವದೆಲ್ಲ ನರಕವು ಸರಿ
ಅನ್ನಪಾನಗಳಲ್ಲ ಅಂತರಾತ್ಮಕನೆ ೩

೧೨೧

ರಾಗ ॥ ಘಂಟಾರಾಗ

ಸಂಗಮೇಂದ್ರನ ಪ್ರಿಯ ಸಕಲಗುಣಸಂಪನ್ನ
ಮಂಗಳಾತ್ಮಕ ಗುರುಕರಿಬಸವ
ಜಂಗಮರಾಯನು ಜಗದಸೂತ್ರಿಕನು
ಲಿಂಗವಸಂತನು ಕರಿಬಸವ ೧

ಇಂತೀ ಕಾವೇರಿ ಮಧ್ಯದಲಿ ವಸಂತನು
ಪಂಥದಿಂದಲಿ ನಿಂದ ಕರಿಬಸವ
ಅಂತರಾತ್ಮಕನು ವಸುತರಾಯನ ಸುತ ನಿ
ಶ್ಚಿಂತನಾದನು ನೋಡಿ ಕರಿಬಸವ ೨

ನಿತ್ಯನಿರಂಜನ ನಿರ್ಮಲ ನಿರುಪಮ
ಭಕ್ತಿವಸಂತನು ಕರಿಬಸವ
ಸತ್ಯಮೋಹರ ಗಂಡನೆಂದೆಂಬ ಬಿರಿದಾಂತ
ಮುಕ್ತಿದಾಯಕ ಗುರು ಕರಿಬಸವ ೩

ನಾನು ನೀನೆಂದೆಂಬ ಉಭಯವಳಿದು ಮಹ
ಜ್ಞಾನಿ ವಸಂತ ಕರಿಬಸವ
ಮಾನಿನಿಯರಿಗರ್ಧದೇಹವನಿತ್ತನು
ಭುವನಕಪ್ರತಿಮನು ಕರಿಬಸವ ೪

ಮರವೆಯು ಶರಧಿ ಮೇರೆವೆ ತಪ್ಪಿ ಬರಲಾಗ
ದೊರೆ ವೀರವಸವಂತ ಕರಿಬಸವ
ಪರಮ ನಿರ್ವಾಣದಿ ಕಯ್ಯನಿತ್ತುದ ರಾಣಿಗೆ
ವೈರಾಗ್ಯವಸವಂತ ಕರಿಬಸವ ೫

ಹೊನ್ನು ವಸಂತನು ಹೆಣ್ಣು ವಸಂತನು
ಮಣ್ಣು ವಸಂತನು ಕರಿಬಸವ
ನನ್ನಾಣೆ ಪುಸಿಯಲ್ಲ ಮಹಿಮಹನ್ನೊಂವೆಯು
ಪವ್ವರ್ನವು ವಸವಂತ ಕರಿಬಸವ ೬

ಇದೆ ಬಂದ ಇದೆ ನಿಂದ ಇದೆ ತೊಲಗದ ಕಂಬ
ಇದೆ ಕುಂಭಿನಿಯು ಕಂಬ ಕರಿಬಸವ
ಹದಿನೆಂಟು ನೆಜ್ಜವು ಕೂಡಿ ಭಂಡಾರಕ್ಕೆ
ಹದಬಲಿಯಿತ್ತನು ಕರಿಬಸವ ೭
ಅರುಹು ವಸಂತನು ಮರವೆ ವಸಂತನು
ಕುರಿಗಳರಿವ ವೀರವಸಂತನು
ಶರಣುಹೊಕ್ಕರ ಕಾಯ್ವ ಕರುಣಿಪ ಗುರುರಾಯ
ದೊರೆ ವೀರವಸವಂತ ಕರಿಬಸವ ೮

## ೧೨೨

ರಾಗ ॥ ಕೇತಾರಗೌಳ

ಈಡಿಗ ದೊಡ್ಡವಾಬನೆಂಬವನು ನಾನು
ನಾಡೊಳಗೊಬ್ಬನೆ ಮೂಢಮಾನವರಿರ
ಗಾಡಿಕಾರನು ಎನ್ನ ನೋಡೆನೆಂಬ ಛಲ
ಈಡ ಹಾಕಿದ ಈಡಿಗ ॥ ಪಲ್ಲ ॥

ಹಳೆಗನ್ನಡವ ಕನ್ನಡಿಸ ಬಂದ ಗುರುಸಿದ್ಧ
ಎಳೆಯ ನಿರ್ವಾಣ ಮರುಳು ಚಿಕ್ಕಸಿದ್ಧನು
ಗಿಳಿ ಕರಿಯಾತ್ಮನೆಂದೆಂಬ ಸೂಳೆಯು ಕೂಡಿ
ಪ್ರಳಯ ವಿಸ್ತರಿಸುವನು ೧

ಕಳೆದೋರಿ ಬಿದಿಗೆಯ ಚಂದ್ರನಂದದೊಳಿತ್ತ
ಹೊಲತಿ ಹೊನ್ನಾಂಬಿಕೆಯೆನಿಸುವ
ಸೂಳೆಯ ಕರಿಕಲಂಧರ ಕರಿಬಸವ
ವೇಶಿಯ ಕರವೆತ್ತಿ ತೋರಿದನು ೨

ಅಭಯಂವಿತ್ತೀರ್ವರಿಗರ್ಧರ್ಧದೇಹವ
ಸರಿಮಾಡಿಕೊಟ್ಟನು ಪರವೆ ಸಂಕಿಲಿಗಂದು
ವಿರಚಿಸಿದನು ಒಬ್ಬ ಸೇವಕಳನು ಮಾಡಿ
ಪರವೆ ಸಂಕಿಲಿಯರಿಗೆ
ಹರುಷದಿಂ ಪರವೆ ಸಂಕಿಲಿಯರೀರ್ವರು ಕೂಡಿ
ಭರದಿಂದ ಸಪ್ತಮಾತೃಕೆಯರಾದರು ತಾವೆ
ಕರುಣದಿಂ ಸಪ್ತಮಾತೃಕೆಯರು
ನೂರೊಂದುಸಾವಿರ ಹೆಣ್ಣಾದರು ೨

ಚಿಕ್ಕ ಸಿದ್ಧೇಶನು ಭಿಕ್ಷಾಟನಕೆಂದು
ಪೃಷ್ಟಿಯೆಂದೆಂಬ ಅಮೃತದ ಕಮಂಡಲದ ಕಯ್ಯ ಮಹ
ಲಕ್ಷ್ಮಿ ನಂಜಿಯೆಂಬಕ್ಷಿಪಾತ್ರೆಯೊಳಿಂದು
ತೃಪ್ತಿಮಾಡುತ ನಿಂದನು
ಭಿಕ್ಷ ಮೋಕ್ಷ ಪರಮಾಮೃತವನು
ದಣಿಸುತ್ತ ಏಳುನೂರೆಪ್ಪತ್ತು ಕಂ[ಕ]ಣ ಸಾಹಿತ್ಯ
ಎಣ್ಣೆ ಕಾವೇರಿ ಮಧ್ಯದಿ ನಿಂದು
ಉಚ್ಚಾಹವಸಗೆಯಿಂದ ೩

ಹರಿಗೋಲು ನೀರೊಳು ಮುಳುಂಗಿಬಹುದ ಕಂಡೆ
ನರಿಯಲ್ಲದವರೆಲ್ಲಯೆದ್ದು ಬಹದ ಕಂಡೆ
ಕರಿಯು ಬಸವರಾಜ ಹರಿಗೋಲ
ನಿಳಿದು ತಾ ತಡಿಗೆ ಏಳುವುದ ಕಂಡೆ
ಅದು ಕಾವೇರಿಹೊಳೆಯಾಗಿಹುದ ಕಂಡೆ
ಅದರೊಳು ಮಿಂದು ನಾ ಶುಚಿಯಾದುದ ಕಂಡೆ
ಇದು ಚೋದ್ಯವಾಗಿದೆ ಪರಮಗುರುವೆಯೆಂದು
ಪರಮನೊಳುಸುರಿದೆನು ೪

ತಾಮಸವೆಂಬ ಸುರೆಯು ಗಡಿಗೆಯು ಮೇಲೆ
ನಾಮ ವಿಭೂತಿ ಗಂಧಾಕ್ಷತೆಯಿಡಲದು
ಆ ಮಹಾಲಿಂಗಾಂಗವಾಗ ಬಲ್ಲುದೆ ನೋಡಿ
ಜ್ಞಾನಿಗಳಾದವರು ಕಾಮ ಕ್ರೋಧ ಲೋಭ
ಸುರೆಯುಮದವು ತುಂಬಿ ನಾಮ ರೂಪು
ಕ್ರಿಯೆಮಿಡಲವ ಶರಣನೆ ಜಾಣರದೇವನು
ಕರಿಯುಬಸವಸಿದ್ಧನಾಮವರಿಯಬಾರದು ೫

ಆರತಿಗಳದಿಂದ ಮೂರರೊಳಗೆನಿಂದು
ಮೀರಿತೋರುವ ತೂರ್ಯ ಆಚಾರ್ಯನುಯೆಂದು
ಕಾರಣಿಕನು ಕರಿವೀರ ಬಸವಸಿದ್ಧ
ರಾಮಾಯುಧವ ಪಿಡಿದು
ಧಾರುಣಿಮುರವೆಯು ಸುರೆಯುಗಡಿಗೆಗಳ
ಸೂರೆಗೊಟ್ಟನು ದೊಣ್ಣೆಯು ಪರಿವಾರಕೆ
ವೀರವಸಂತರಾಯನ ಬಲಭುಜದಂಡ
ಸಾರಿ ಹೇಳಿದ ಕಡೆಯು ೬

೧೨೩

ವಸವಂತದ ಕ್ರಮುವಿಡಿದು
ಆಸಮಾಕ್ಷಲಿಂಗದಲಿ ಶಶಿಮುಖಿಯನು ಕೂಡಿ
ಬಸವದಂಡೇಶನು ಪೊಸರತಿಬಂಧದಿಂದ ॥ ಪಲ್ಲ ॥

ಕರಿಚರ್ಮಾಂಬರ ತನ್ನ ಕರಿನಂಜಿಯೆಂದೆಂಬ
ಕರಿಯುಚರ್ಮಾವುಗೆ ಮೆಟ್ಟಿ ನಿಂದನು ರಾಯ
ಕರಿವೀರವಸವಂತನು ಧರೆಯುಮೇಲಿಕ್ಕಿದನು
ಬಿರಿದಿನಗೊಂಡೆಯುವ
ಹರಿ ಹರ ಬ್ರಹ್ಮಮೀಶ್ವರನಾದ
ಪರಪರಪರಕೆ ನಿಲುಕದಿದೆಂದು ೧

ಭಕ್ತಿಯೇ ಬರನಾಗಿ ಚಿಪ್ಪಿನೊಳುದಕ ಮೊಗೆದು
ಕತ್ತಲೆಗವಿಯಿಂತು ಕರುಣರಸವ ಬೀರಿ
ಕಪ್ಪಿನಿ ಸ್ಥಿರದಲಿ ಕತ್ತು ಕಂಕಣಗಟ್ಟಿ
ಸತ್ವಮಾತ್ರಿಕೆಗೂಡಿ ನಿತ್ಯ ಅನಿತ್ಯಗಳೆಂದೆಂಬ ಮುಹಘನ ತೆಪ್ಪದ ತಿರುನಾಳು ೨

ಅಷ್ಟದಿಕ್ಕಿನ ಕೊಳನು ಸೃಷ್ಟಿಕೇಡಾಕುಳಿಯು
ಚಿಟ್ಟಿ ಭುಗಿಲುಯೆಂಬ ಪೆಟಲುಗುಂಡು
ಪಟುಭಟರೆಲ್ಲರನು ಕೂಡಿ ನೀಟುದೋರಿದನಿಂದು
ನಾಟಕ[ವಾಡು]ವರಗಂಡ ಸಾಟಿಯಿಲ್ಲದೆಯೆನ್ನ
ಸರಿಮಿಗಿಲೆನಿಸಿದ ಜೇಕೊರ್ಳವೆಯುವಿಡಿದು ೩

ಚಂದ್ರಮತಿಯು ತನ್ನ ಚಂದ್ರಶೇಖರನೆಂಬ
ಚಂದ್ರಗಾವಿಯುನುಟ್ಟು ಲಿಂಗದೊಳಗೆ ಕೂಡಿ
ಬಂದು ನಿಂದಳು ಭವಾನಿ

ಒಂದಾದ ಬಿರಿದಿನ ಚಂದದ ಕೊಳವಿಡಿದು
ಗಂಧ ಕಸ್ತೂರಿಯು ಕದಂಬದೋಕುಳಿಗಳ
ಚಂದ ಚಂದದೊಳೆಸೆದು ೪

ರುದ್ರ ವಿಷ್ಣು ಬ್ರಹ್ಮ ಕ್ಷುದ್ರದೈವದಗಂಡ
ಸಿದ್ಧಬಸವ ಚಂದಬಿಬ್ಬಿಯು ಕೂಡಿ ಮಹ
ಭದ್ರಗಜದಕೊಳದಿ
ಚಿದ್ರೂಪವಸವಂತ ಸಿದ್ಧರಸವು ತುಂಬಿ
ಹೊದ್ದಿದವರೊಳಗೆ ಒಸೆದು ಎಸೆದು ನಮ್ಮ
ಮುದ್ದುಮುಖದ ರಾಯನು ೫

ಶುಕ್ಲಸಂವತ್ಸರದ ಪಕ್ಷಪ್ರಮಾದೀಚ
ಮುಕ್ಕಣ್ಣ ಶಿರವರಿದು
ಕರದೊಳೊಂದ ಚಿಕ್ಕಸಿದ್ಧೇಶನೆಂದು
ಉತ್ತರದೇಶದಲಿ ಎತ್ತಿ ಧನುವ ಪಿಡಿದು
ದಕ್ಷಿಣಕಿಳಿದು ಬಂದಿಂದು
ದಯಾಧರ್ಮಭಿಕ್ಷಾಟಣವಿದೆಂದು ೬

ಬಲ್ಲಪಯೋಧರೆ ವಲ್ಲಭ ದಾಸನು
ತನ್ನ ಬಿಲ್ಲಪಿಡಿದು ತುಂಬ
ತೆಗೆದುಯೆಸೆದು ನಮ್ಮ ಬಿಲ್ಲ ಆಲುಗನುಯೆಂದು
ಅಲ್ಲಿಗಲ್ಲಿಗೆ ಬೊಬ್ಬೆ ಬಿಲ್ಲಿನಯೆಸುಗೆಗೆ
ಹಲ್ಲಕಿರಿದು ಹುಲ್ಲಕಚ್ಚಿ ಹುತ್ತವನೇರಿ
ಅಲ್ಲಿ ಬಿಡದೆ ಕಡಿದು ೭

ಕಾನನವನು ಮುರಿದು ಖಗಮೃಗಗಳ ತುಳಿದು
ಮದ್ದಾನೆ ಮಹಘನ ಮದಕರಿಬಸವನು
ತಾನೆ ತಾನಾಗಿ ನಿಂದು
ನಾನೆ ರಾಜನು ನಾನೆ ನಾನೆ ದೇವರುಯೆಂಬ
ನಾಯಕನರಕದೊಳದ್ದಿ ಮುಳುಗಿಸುತ್ತ
ರಾಯಕುಮಾರ ನಿಂದು ೮

ಬಗಿನಿಗಟ್ಟಿದ ಕಲ್ಲು ಭ್ರಷ್ಟಮಾನವರಿಷ್ಟ
ಸುರೆಯಗಡಿಗೆ ತುಂಬಿ ಬಗಿನಿಗಟ್ಟಿದ ಕಲ್ಲು
ತೆಗೆದಿಟ್ಟ ತೆರನಾಯಿತು

ಅಗಣಿತಮಹಿಮನು ಗುರುಕರಿ
ಬಸವಾರ್ಯ ಸುರೆಯಂಗಡಿಗೆಗಳ
ಕರದ ದೊಣ್ಣೆಯೊಳಿಂದು ಒಡೆದು ವಸವಂತವಾಡಿ ೬

೧೨೪

ರಾಗ ॥ ಕೇತಾರಗೌಳ

ದಾಳಿ ಬಂದನು ನೋಡಿ ಖೂಳಮಾನವರಿರ
ಕಾಳಬಸವರಾಜನು ಹೇಳುವರಳವಲ್ಲ
ಸೂಳೆಗೇರಿಯ ಸುಟ್ಟು ಬಾಳುಬಟ್ಟಲದೇವನು ॥ ಪಲ್ಲ ॥

ಮಹಿತಳಮಹಿಪುರ ಮಹಿಕೋಲಾಹಳ
ಭುವನಕಪ್ರತಿಮರಾಯ
ಮಹಿಮಾರ್ನಕೆ ಬಂದ ಮಸಿಯತಿಲಕವಿಟ್ಟು
ಫಣೆಮಹಿಕಂಕಂಕಾಳಿಯೆಂದು
ಮಹಿಮಹದೇವನು ಮಹಶೀಲಶೂಲನು
ಮನುಮುನಿಗಳಿಗೆ ವಂದ್ಯ
ಮಹಿಮಹ ಮನ್ಮಥ ಕರಿಯಬಸವರಾಜ
ಮಹಿಕಪಾಲವನಾಂತನು ೧

ಆರುಮಂದಿಯು ಆರುದರುಶನವೆಂದೆಂದು
ಆರವಿೂರಿತು ತೂರ್ಯವು
ಆರುಬ್ರಹ್ಮ ರುದ್ರವೀಶ್ವರ ಸದಾ ವಿೂರಿತು
ಪರತತ್ವವ ಸಾರಿ ಹೇಳಿದ ನಾನು
ಕಾರಣಕನುಯೆಂದು ಆರೂಢಸ್ಥಲವ ವಿೂರಿ
ತೋರ ಬಂದೆನು ನಾನು ಆನಂದ ಲೀಲೆಯು
ಬೀರಿ ಬ್ರಹ್ಮಾಂಡದೊಳು ೨

ಆನಂದ ಸಂವತ್ಸರ ತಾ ನಂದಿಧ್ವಜವನು
ನಾನೆಂದೆತ್ತಿದೆನು
ಕಾನನದೊಳಗಿಹ ಕಪಿಗಳೆಲ್ಲಕೆ ಪರ
ಮಾನಂದವಾಯಿತೆಂದು
ನಾನು ನೀನೆಂಬ ಸಂದೇಹವಳಿದು ಜಡ
ಹೀನ ಮಾನವರುಗಳ
ಏನೆಂಬೆ ಆದಿ ಅನಾದಿ ಮಹಾಘನ
ದಾನಂದಲೀಲೆಯುನು

ಎತ್ತಿದ ವೇಷನ ಕರಮರ್ತ್ಯದೊಳಿಂದು
ನಿತ್ಯ ನಿರಂಜನನು
ತಥ್ಯ ಮಿಥ್ಯವ ನುಡಿವ ಹುಚ್ಚು ಮಾನವರಿಗೆ
ಮಸ್ತಕ ಶೂಲನೆಂದು
ವಿಸ್ತರಿಸುವ ವೇದವ್ಯಾಸ ಋಷಿಯು ತನ್ನ
ಭಕ್ತ ಶಿಷ್ಯರುಗಳಿಗೆ
ನಿತ್ಯ ಉಳ್ಳುವ ನಾನು ಮರೆದು ಕೇಶವನೆಂದು
ಎತ್ತಿದೆ ಕರವಿದಕೊ ೪

ಕರಿ ಕರಿ ಕರಿದೆಂದು ಉರಿಯು ಬಸವನೆಂದು
ಧರೆ ಕೆಂಡವಾಯಿತೆಂದು
ಕರಿ ವೀರವಸವಂತ ಶರಭ ಮೊರೆಯೊಯೆಂದು
ನರಕಿಗಳೊರೆವುತಿದೆ
ಹರುಷದಿಂ ಮೇಘವ ಸೂರ್ಯಮಂಡಲವಾಗಿ
ಶಶಿ ರವಿಯಾಯಿತೆಂದು
ಗುರುನಂಜಿ ನಂಜುಂಡ ಗರಳದಬ್ಬರವೆಂದು
ಕರವೆತ್ತಿ ತೋರಿದೆನು ೫

ಜಗದಾರಾಧ್ಯನುಯೆಂಬ ಜಗದ ಜಟ್ಟಿ
ಜಗದೊಳೆತ್ತಿದೆನು ನಾನು
ಜಗದ ಒಡೆಯು ಕುಂಭ ಕುಂಭ ಬಸವನೆಂದು
ಧ್ವಜವೆತ್ತಿ ತೋರಿದೆನು
ಜಗದೊಳೇಕೋದೇವನೆಂಬ ಧ್ವಜವನೆತ್ತಿ
ಜಗಹಿತಾರ್ಥನು ಬಸವ
ಜಗಕೆ ಒಪ್ಪುನವಿತ್ತು ಜಗವ ಪಾವನಮಾಡಿ
ಜಗಜಗಿಸಿತು ಜಗವು ೬

ಎತ್ತಿ ಧ್ವಜವಪಿಡಿದೆತ್ತಿ ನಾ ಬಸವಯ್ಯ
ಸತ್ವಮಾತ್ರಿಕೆಯು ಕೂಡಿ
ಭಕ್ತದೇಹಿಕದೇವ ದೇವದೇಹಿಕ ಭಕ್ತ
ಕರ್ತುಕಾರಿಯು ಬಸವ
ವಿಸ್ತರಿಸುವರಳವಲ್ಲ ವಿವಾಹದ
[ವಿಸ್ತರ]ವೇನೆಂಬೆನು
[ಮುಕ್ತಿಯು] ಮಾರಿತೆಂದೆತ್ತಿ ಭಲ್ಲೆಯು
ಪಿಡಿದಪ್ಪ ದಿಕ್ಕಿನೊಳಿರಿದ ೭

ಬಾಣ ಬಸವಯೆನ್ನಾಣೆ ಕರಿಯುಸಿದ್ಧ
ತಾನೆ ತಾನಾಗಿ ಬಂದ
ಕಾ [ಣು ತಿರಲು] ಕಲಿಯುಗದವಳವ ವೊಂದೆ
ಬಾಣದೊಳಗೆ ಸುಟ್ಟ
ಆಣಿಕಾರನೆ ಬಲ್ಲ ಮಾಣಿಕವೆಂಬುದ
ಹೀನವಮಾನವ ಬಲ್ಲನೆ
ಜಾಣರದೇವನು ಜಗದಸೂತ್ರಿಕನು
ಬಾಣದ ಬಸವುಗನು ೮

ದಂಡ ಪಾಶವ ಪಿಡಿದಂದವನೇನೆಂಬೆ
ಹಿಂಡುದೈವದಗಂಡನು
ತಂಡತಂಡದ ರಣಹಿಂಡಿನೊಳಗೆ ಹೊಕ್ಕು
ಚೆಂಡಾಡಿ ಶಿರಗಳನು
ಹಿಂಡು ಮರುಳುಗಳು ಕೊಂಡಾಡಿ ರಣದೊಳು
ಚಂಡವಿಕ್ರಮ ಬಸವ
ಹಗೆಂದು ತಮ್ಮೊಳು ತಾವೆ ಉಂಡು ಸಾವಿಯು ಕಂಡು
ತಂಡತಂಡದಿ ಕುಣಿದು ೯

ಭಲರೆ ಅಪ್ರತಿಮ ಅನಾದಿ ಅನಾದಿಯೆ
ಭಲರೆ ಭಾಪುರೆ ಬಸವ
ಭಲರೆ ಪಿಂಡಾಂಡ ಬ್ರಹ್ಮಾಂಡನಾಯಕನೆಂದು
ಬಲು ಭೂತಗಳು ಹೊಗಳೆ
ಭಲರೆ ಭಾಪುರೆಯೆಂದು ಬ್ರಹ್ಮಾಂಡ ಕಪ್ಪರ ತುಂಬಿ
ತುಳುಕಿ ತುಯರ್ಶಾತೀತನೆ
ಭಲರೆ ಭೂತಗಣವು ಉಂಡು ಥಟ್ಟನೆತೇಗಿ
ಭಲರೆ ಭಾಪುರೆ ವಸಂತ ೧೦

೧೨೫

ರಾಗ ॥ ತೆಲುಗು ಕಾಂಬೋದಿ

ಕೋಲು ಕೋಲೆನ್ನ ಘನಲೀಲೆ
ಕೋಲು ಕೋಲಂಗಲಿಂಗದ ಮೇಲೆ
ಕೋಲು ಸುಜ್ಞಾನದ ಕೋಲೆ
ಭಕ್ತಿ ಲೀಲೆಯಿಂ ಪಾಡೆಲ್ಲ ಲಾಲೆ ॥ ಪಲ್ಲ ॥

ಒಂದೊಂದು ಕೋಲ ಪಿಡಿಕೊಂಡು
ಆರು ಮಂದಿಯೊಳು ಕೂಡಿತ್ತ ಕೋಲೆ

ಒಂದಾಗಿ ಓಮ್ಕನದ ಕೋಲೆ
ಕೂಡಿ ಸಂಗಯ್ಯನೆಂದೆಂಬ ಕೋಲೆ ೧

ಹರಿಯು ಹರ ಬ್ರಹ್ಮಾದಿಗಳನು
ಹಳಿದು ತುಳಿದು ತಾ ತಾನಾದ ಕೋಲೆ
ಪರಮ ಪರತತ್ವವೆಂಬ ನಾನು
ಮೂಗನರಿದು ಕನ್ನಡಿಯಿಂತ್ತ ಕೋಲೆ ೨

ಪ್ರತಿಯಿಲ್ಲದಪ್ರತಿಮ ಲೀಲೆ
ಘಟಿಸಿತಪರಿಮಿಂತ ತಾನಾದ ಮೇಲೆ
ಮಥನಿಸುವ ಮರ್ತ್ಯದ್ದು ಶೀಲೆ
ನಮ್ಮ ಪ್ರತಿಗೊಹೇಶ್ವರಲಿಂಗ ಲೀಲೆ ೩

ಶರಣಸತಿ ಲಿಂಗಪತಿಯಂತೆ ಕಾಮ
ನುರುಹಿ ಭಸ್ಮವಿಟ್ಟನಂತೆ
ಅರಿತಿಮೀರ ಮಾರ್ತಾಂಡನಂತೆ
ನಮ್ಮ ಗುರುಗೊಹೇಶ್ವರಲಿಂಗ ಕಾಂತೆ ೪

೧೨೩

ರಾಗ ॥ ಶಂಕರಾಭರಣ

ತಿರುತಿರುಗಿ ನಾ ಬಂದೆ ತಿರುಕನಾಗಿ ನಿಂದೆ
ಅರಿಯುವು ಕಾನನದೊಳಗಿಹ ಕಪಿಗಳು
ಕೊರವನ ಇಂಗಿತವ ॥ ಪಲ್ಲ ॥

ಕೊರವರ ಸಿಂಗನುಯೆಂದು
ಕೋತಿಯು ಕಯ್ಯಲಿ ಪಿಡಿದು
ಶರಣರ ಸೆರಗೊಡ್ಡಿ ಬೇಡುತ ನಾ ಬಂದೆ
ಸ್ಥಿರಕರಿಬಸವನೆಂದು ೧

ಕೊರವನು ಕರಿವೀರಬಸವ್ವಗನು
ಕೊರದು ಕರ್ಮವನು ಕತ್ತರಿಸುವನು
ಹರಿ ಹರ ಬೊಮ್ಮನೆಂದೆಂಬ ಸಿಂಗಳಿಕನ
ಸರಪಣಿಯೊಳಗೆ ಕಟ್ಟಿ
ಧರಣೀಶವಸವಂತರಾಯನೊಬ್ಬನೆಯೆಂದು
ಕುಣಿಸುತ ಬಂದಿಹ ಪರಮದೇಶಿಕನಾಗಿ
ಅ . . . ವಾಗಿ ಅಳವಲ್ಲವು ೨

ಹೊಲಗೇರಿಯು ನಾಯಿಗಳೆಲ್ಲ
ಹೊಲಬರಿಯದೆ ಬಗುಳುತಯೆಲ್ಲ
ಕೊಲ್ಲುವನು ಕಡಿವನು
ಹಲ್ಲನು ಮುರಿವನು
ಹೊಲೆಯನ ಗುರುತರಿಯೊ
ಛಲದಂಕ ಕರಿಬಸವ
ಸಲೆ ತಟ್ಟನೆ ನೆನವವರ
ಹೃದಯದ ಕಮಲ ಮಧ್ಯದಿ ಬೆಳೆವನು
ಗುರುಕರಿಬಸವನೆಂದು ೩

ಕಟ್ಟಾಣಿ ಮುತ್ತಿನಮಣಿ ನಂಜಿ
ಕೊಟ್ಟ ಭಾಷೆಗೆ ತಪ್ಪುವಳಲ್ಲ
ಸೃಷ್ಟಿಯನಾಳುವ ಕರಿವೀರಬಸವನಿಗೆ
ಕೊಟ್ಟಳು ಅಭಯುವನು
ಪಟ್ಟದರಸಿನಂಜಿ ಪುಷ್ಟಿಯು ತನ್ನೊಳಗಿಟ್ಟು
ಪುಷ್ಟಿನಂಜಾಂಬಿಕೆ ನಂಜಿ ಪುಷ್ಪಾಂಜನೆ
ವಿಸ್ಮಯದೊಸವಂತ ೪

ಆಸ್ತಿಕರಾಯನೆಂದೆನಿಸುವನು
ಕೊರವಮಾಟವೆ ಕಡೆಯೆಂದು ಸಾರಿದೆನು
ಮೋಸವಮೂರಕೆ ನಾ ಲೇಸ ತೋರುವೆನು
ವಿಲಾಸದ ವಸವಂತ
ಸೂಸಿತು ಬ್ರಹ್ಮಾಂಡದೊಳು ಆ ಪರಬ್ರಹ್ಮವೆಯೆಂದು
ಪಾಶವ ಬೀರಿ ನರಕಕೋಟಿಗಳೆಲ್ಲವ
ಈ ಪರಿಕುಣಿಸುತಲಿ ೫

## ೧೨೭

ರಾಗ ॥ ಘಂಟಾರಾಗ

ದಂಡಿಗೆ ಪಿಡಿದುದ್ದಂಡ ಕರಿಬಸವುಗನು
ದ್ದಂಡನಾಯಕ ವೀರವಸವಂತನೆಂದು
ಖಂಡಿಸುತ ಕಡಿಕಡಿದು ತುಂಡುತುಂಡನು ಮಾಡಿ
ನಂಡಿಸಿದ ಸಟೆಗಳನು ಸನ್ಯಾಸಿಯೆಂದು ೧

ಅಂಗಲಿಂಗವು ನಾನೆ ಮಂಗಳ ಮಹಿಮನು ನಾನೆ
ಮಂಗಳಮಹಾಘನದ ಬೆಳಗು ನಾನೆ
ಸಂಗಸಮರಸ ಅಂತರಂಗಮಧ್ಯದಿ ನಿಂದು
ಕಂಗಳಿರೂಪಾಗಿರುತಿರ್ದೆನು ೨

ನಾನು ಲಿಂಗವು ನಾನು ಸಂಗಮೇಂದ್ರನು ನಾನೆ
ನಾನೆ ನವರಸಿಕ ತುರ್ಯಾತೀತ ನಾನೆ
ನಾನೆ ನಾನಾಗಿರ್ದು ಜಗವಪುಟ್ಟಿಸಿ ನಾನೆ
ನಾನಾವಿನೋದದಿಂ ನಾನಾಗಿ ಬಂದೆ ೩

ನಾನೆ ಸವಿಯು ಭೋಗಗಳನು ಭೋಗಿಸಲೆಂದು
ನಾನಾತ್ಮಲಿಂಗಾಂಗವಾಗಿ ನಾ ಬಂದೆ
ನಾನೆ ಪತಿಯು ನನ್ನ ಸತಿಯಾದವರು ಕೇಳಿ
ನಾನಲ್ಲದನ್ಯವಿಲ್ಲೆಂದು ನಾ ಬಂದೆ ೪

ನಾನು ಜಗದರಾಯ ನಾನು ಜಗದಾರಾಧ್ಯ
ನಾ ಜಗದ ಸೂತ್ರಿಕ ವೀರ ವಸವಂತ
ನಾನೆ ವೀರಾಧಿವೀರರಿಗೆ ವೀರನು ನಾನೆ
ನಾ ಕೆಂಪಿನ ಗಣೆಯ ವೀರವಸವಂತ ೫

ನಾನೆ ಸಿಂಹನು ಶರಭ ಭೇರುಂಡನು ನಾನೆ
ನಾನೆ ಕರಿಯುರಿಯುದು ಸುಟ್ಟು
ನಾನೆ ಕಳೆ ನಿಃಕಳೆಯು ನೆಟ್ಟು ನಟ್ಟುವ ನಾನೆ
ನಾನೆ ಕೋಲಾಟವನ್ನಾಡಿಸುವ ನಾನೆ ೬

ನಾನೆ ಸಕಲಾಗಮಕೆ ನಿಗಮಾತೀತನು ನಾನೆ
ನಾನೆ ಪಿಂಡಾಂಡ ಬ್ರಹ್ಮಾಂಡ ನಾಯಕನು
ನಾನು ಸೂಳೆಯರುಗಳ ಕೊಲದ ಕೊಲೆಯಂ ಕೊಂದು
ನಾನೆ ಕಾಲಾಂತಕನು ವೀರ ವಸವಂತೆ ೭

೧೨೪

ರಾಗ॥ ಗುಂಬ ಕಾಂಬೋದಿ

ನಲಿದಿತ್ತ ನಮ್ಮಯ್ಯ ವೈಕುಂಠನಾಮವನು
ಸಲೆ ತವಕದಿಂ ನುಡಿದ ಸರ್ವಜ್ಞ ಲಿಂಗ
ವಲಿದಿತ್ತ ನಮ್ಮಯ್ಯ ವೈಕುಂಠನಾಮವನು ॥ ಪಲ್ಲ ॥

ಕದನ ಕಂಠೀರವ ಕರಿಯಾತ್ಮ ಕರಿವಸವಂತ
ಇದೆ ಅಮೃತವಾಕೆಂದು ನುಡಿದ ಸಂಧಾನ
ಗಡಿಯ ಮೀರಾಡುವ ನಿಧಾನ ಎನ್ನ
ನುಡಿ ತಪ್ಪಿತೆಂದವರ ಗಾಣ
ಸಿದ್ಧಾಂತ ಹಗರಣದ ಹಬ್ಬಕ್ಕೆ ನಿಂದ ಸುಜಾಣ ೧

ದವಸ ಧಾನ್ಯಗಳುಳ್ಳ ಅರಸು ಪರಿವಾರಕ್ಕೆ
ಅವಶಕುನವಾಯಿತ್ತು ಬಲ್ಲವರು ಕೇಳಿ
ದವಸ ಧಾನ್ಯವ ಸೂರೆಗೊಟ್ಟು
ಆತ್ಮದಯವ ತಾ ಸುಟ್ಟು ಬೊಟ್ಟಿಟ್ಟು
ನಿಮ್ಮ ಅರಸು ಪರಿವಾರ ಒಂದಾಗಿ ವರವಿತ್ತು ೨

ತೆಪ್ಪ ತಿರುನಾಳು ಬಂದಿತು
ಅಷ್ಟದಿಕ್ಕಿನೊಳು ಒಚ್ಚಲಾಯಿತು
ಹೊಳೆಯು ಉಚ್ಚಹವೆಂದು
ಎಚ್ಚಾಟ ಬಂತು ಉದುಂಕಕ್ಕೆಯೆನ್ನ ಭಕ್ತರಿಗೆ
ಪ್ರಿಯನೆನಿಸಲ್ಕೆ ಭಲರೆ ಕುಚ್ಚಿತರಗಂಡ
ಕರಿಬಸವನುದಿಸಲಿ ೩

ವೃತಮುನಾಗರ . . . ತಹತವು ಬೆನಕನ
ಚೌತಿ ಶತಸಹಸ್ರವು ತೋರುವದೊಂದು ಚೋದ್ಯ
ಬಸವ ಹೊಸದುರ್ಗಿಯೆಂದೆನಿಸಿ ಈತ
ಕುಸುಮಶರ ಯಮದೂತನೆನಿಸಿ ಭಲರೆ
ಕಸಗಳೆಯ ಬಂದ ಕರಿಮಾರಿಯೆಂದೆನಿಸಿ ೪

ಕಲಿಯ ಕಾಲನ ಮುರಿದು ಕರಿಯ ಬಸವನ
ಕಾಲ ನೆಲೆಯಾಗಿ ಬಂದಿತ್ತು ನೆನಿಗಳು
ಕೇಳಿ ಕುಲಚಲದ ಹೊಲೆಯರನು ಬೀರಿ ಇವರ
ಮಲವ ತಿನ್ನಿಸಿ ಇವರ ಕಾಡಿ ಭಲರೆ
ಛಲದಂಕ ಕರಿಬಸವನೆನಿಸಿ ಕೊಂಡಾಡಿ ೫

ಅತ್ತ ತೋರುವದು ವಿಸ್ಮಯದ ರಣಮಯದ ಲೀಲೆ
ಕತ್ತರಿಸಿ ಕೈಕಾಲು ಕಿವಿ ಮೂಗುಗಳನು
ಕಿತ್ತು ಬಿಸುಟಾಡುತಿಹ ಚಂದ ನರರು
ಅರ್ಥಿಯಿಂ ಪಾಡುವಾನಂದ ರಾಯ
ಉತ್ತರಕೆ ಮುಖವಾಗಿ ನಡೆದ ಬೆಡಗಿಂದ ೬

---

# ಅನುಬಂಧಗಳು

## ಪಲ್ಲವಿಗಳ ಆಕಾರಾದಿ

(ಹಾಡುಗಳ ಸಂಖ್ಯೆ ಕೊಟ್ಟಿದೆ)

## ಅಂಕಿತ ನಾಮ



## ಸ್ಥಳನಾಮ

೧೭೪ ಕರಿಬಸವೇಶ್ವರನ ವಚನ



## ಸಂವತ್ಸರಗಳು



## ವಿಶಿಷ್ಟ ಪದ

## ರಾಗಗಳು



## ಕಾವ್ಯರೂಪ



## ಛಂದೋರೂಪ

ಸುತ್ತೂರು ಶ್ರೀ ಜಗದ್ಗುರು ವೀರಸಿಂಹಾಸನ ಮಹಾಸಂಸ್ಥಾನಮಠ, ನಾಡಿನ ಒಂದು ಪ್ರಾಚೀನ ಧರ್ಮಪೀಠ. ಚೋಳಚಕ್ರೇಶ್ವರನ ಪ್ರಾರ್ಥನೆಯ ಸುಮಧುರ ರಸಾವೃತ ಫಲ. ಸಂಸ್ಥಾಪನಾಚಾರ್ಯರು ಆದಿಜಗದ್ಗುರು ಶ್ರೀ ಶಿವರಾತ್ರೀಶ್ವರ ಭಗವತ್ಪಾದರು. ಆ ಮಹಾಶಿವಯೋಗಿಗಳು ನಿತ್ಯನಿಜಾನಂದದಲ್ಲಿ ಸದಾ ನೆಲೆಸಿರುವ ಶಿವಯೋಗಸಮಾಧಿ —ಸುತ್ತೂರು ಶ್ರೀಕ್ಷೇತ್ರಗದ್ದುಗೆ. ಅದು ನಿಶ್ಚಿಂತ ನಿಜನಿವಾಸ, ಬೆಳಕಿನ ಪ್ರಶಾಂತ ಆವಾಸ. ಅಲ್ಲಿಂದ ಹೊರಹೊಮ್ಮುವ ಶಿವಬೆಳಗು ಸರ್ವವ್ಯಾಪಿಯಾಗಿ ಹರಹಿದೆ. ನಡೆದು ಬಂದಿರುವ ಗುರುಕುಲದ ಕಲ್ಯಾಣ ಅಸದೃಶವಾಗಿ. ಉಜ್ವಲವಾದ ಆ ಗುರುಪರಂಪರೆಯಲ್ಲಿ ಬಂದ ಮಹಾನುಭಾವರೆಲ್ಲರೂ ಕಾರುಣ್ಯಸಿಂಧುಗಳು, ಲೋಕೈಕಬಂಧುಗಳು.

ನಾಡಿನ ಧಾರ್ಮಿಕ-ಸಾಮಾಜಿಕ, ಶೈಕ್ಷಣಿಕ—ಸಾಂಸ್ಕೃತಿಕ ಕ್ಷೇತ್ರಗಳ ಸಮಗ್ರ ಅಭಿವೃದ್ಧಿಗೆ ಶ್ರೀಪೀಠದ ಸೇವೆ ಅಮೋಘ ಹಾಗೂ ಅದ್ವಿತೀಯ. ಸಾಹಿತ್ಯ—ಸಂಗೀತ—ಕಲೆಗಳಿಗೆ ಶ್ರೀಪೀಠದ ಕೊಡುಗೆ ಅಸಂಖ್ಯ ಹಾಗೂ ಗಣನೀಯ. 'ಪರಮಶಿವಾಧಿಕ್ಯ ಚೂಡಾಮಣಿ' ಗ್ರಂಥವನ್ನು ರಚಿಸಿ ಶ್ರೀ ಮಲೆಯಮಾದೇಶ್ವರರಿಗೆ ಆಶ್ರಯ ನೀಡಿದ ಸಿದ್ಧನಂಜದೇಶಿಕೇಂದ್ರರು; 'ಅಮುಗಿದೇವಯ್ಯಗಳಸಾಂಗತ್ಯ'ವನ್ನು ಬರೆದ ಕವಿ ಶಿವಲಿಂಗದೇವನಿಗೆ ಪ್ರೇರಕ—ಪೋಷಕರಾದ ಕಪಿನೀನಂಜುಂಡದೇಶಿಕೇಂದ್ರರು; ತೋಂಟದ ಸಿದ್ಧಲಿಂಗಯತಿಗಳ ಶಿಷ್ಯಪ್ರಮುಖರಲ್ಲಿ ಒಬ್ಬರಾಗಿ ಸ್ವತಂತ್ರವಚನಕಾರರೆಂದು ಪ್ರಸಿದ್ಧರಾದ ಘನಲಿಂಗಿಶಿವಯೋಗಿಗಳು; 'ಮಂತ್ರಮಹರ್ಷಿ'ಗಳೆನಿಸಿ 'ಶಿವಮಂತ್ರಮಹಿಮೆ' ಗ್ರಂಥವನ್ನು ನೀಡಿದ ಜಗದ್ಗುರು ಶ್ರೀ ಶಿವರಾತ್ರೀಶ್ವರ ಮಹಾಸ್ವಾಮಿಗಳು; 'ಘನಲಿಂಗಿದೇವರ ವಚನಗಳು' ಮತ್ತು ಶ್ರೀ ಗೌರೀಶಂಕರ ಮಹಾಸ್ವಾಮಿಗಳವರ 'ಅಕ್ಕಮಹಾದೇವಿ' ಚಂಪೂಕಾವ್ಯ—ಇವುಗಳನ್ನು ಸಂಪಾದಿಸಿಕೊಟ್ಟ 'ಶ್ರೀಮನ್ಮಹಾರಾಜ ರಾಜಗುರುತಿಲಕ' ಜಗದ್ಗುರು ಡಾ. ಶ್ರೀ ಶಿವರಾತ್ರಿರಾಜೇಂದ್ರ ಮಹಾಸ್ವಾಮಿಗಳು; 'ಮುಪ್ಪಿನ ಷಡಕ್ಷರಿಗಳ ತ್ರಿ[illegible]'ವನ್ನು ಸಂಪಾದಿಸಿಕೊಟ್ಟು ಗ್ರಂಥ ಪ್ರಕಾಶನಕ್ಕೆ ಪ್ರೋತ್ಸಾಹವೀಯುತ್ತಿರುವ ಪೂಜ್ಯ ಜಗದ್ಗುರು ಶ್ರೀ ಶಿವರಾತ್ರಿದೇಶಿಕೇಂದ್ರ ಮಹಾಸ್ವಾಮಿಗಳು—ಇವರೇ ಮೊದಲಾದ ಗುರುವರೇಣ್ಯರು ಕೈಕೊಂಡ ಧರ್ಮಸಂರಕ್ಷಣೆ—ಸಾಹಿತ್ಯಪರಿಪೋಷಣೆ ಗಮನಾರ್ಹ ಹಾಗೂ ಸ್ತುತ್ಯರ್ಹ. ಮನುಕುಲದ ಏಳಿಗೆಗಾಗಿ ಶ್ರೀಪೀಠದಿಂದ ಸಲ್ಲುತ್ತಿರುವ ಮಹತ್ಸೇವೆ ಅಭಿವಂದನೀಯ ಹಾಗೂ ಸದಾ ಸಂಸ್ಮರಣೀಯ!

ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ : ಮೈಸೂರು